ಕನ್ನಡ ಕಾವ್ಯಮಾಲೆ: ೨೯

# ರಕ್ತಾಕ್ಷಿ

ಕುಪ್ಪಳ್ಳಿ, ವೆಂಕಟಪ್ಪ, ಪುಟ್ಟಪ್ಪ.
ಕುವೆಂಪು



ಕಾವ್ಯಾಲಯ
ಮೈಸೂರು

# ಮುನ್ನುಡಿ

ಈಗ ಕೆಲವು ತಿಂಗಳ ಹಿಂದೆ ನನ್ನ ಪ್ರಿಯಮಿತ್ರರಾದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ತಮ್ಮ "ರಕ್ತಾಕ್ಷಿ" ನಾಟಕಕ್ಕೆ ನಾನು ಒಂದು ಮುನ್ನುಡಿಯನ್ನು ಬರೆಯಬೇಕೆಂದು ಕೇಳಿದರು. ನಾನು "ಬಂಗಾರದ ಅರಮನೆಗೆ ಹಿತ್ತಾಳೆಯ ಕಳಸವೇ?" ಎಂದು ಆಕ್ಷೇಪಿಸಿದೆ. ಅವರು ಅದಕ್ಕೆ ಉತ್ತರವಾಗಿ, "ಎಂತಹ ಅರಮನೆಯಾದರೆ ಏನು? ಸಿಡಿಲಿಗಂಜಿ ಕಬ್ಬಿಣದ್ದಾದರೂ ಅದರ ಕ್ಷೇಮಕ್ಕೆ ಅತ್ಯಾವಶ್ಯಕವಲ್ಲವೇ?" ಎಂದು ಉಪಮಾನಕ್ಕೆ ಪ್ರತ್ಯುಪಮಾನವನ್ನು ಕೊಟ್ಟು ಒಂದು ವಿಶ್ವಾಸಪೂರ್ಣವಾದ ವಾಕ್ಯಾರ್ಥ ನಡೆಸಿದರು. ಈ ವಾಕ್ಯಾರ್ಥದಲ್ಲಿ ಅವರೇ ಗೆಲ್ಲಲು, "ಶಿಷ್ಯಾದಿಚ್ಛೇತ್ ಪರಾಜಯಂ" ಎಂಬ ಹಳೆಯ ಹೇಳಿಕೆಯ ತತ್ತ್ವವು ಹೊಸದಾಗಿ ಸ್ಥಾಪಿತವಾಯಿತು. ಇದು ಈ ಮುನ್ನುಡಿಯ ಚರಿತ್ರೆ.

ಇದನ್ನು ಬರೆಯುವುದಕ್ಕೆ ನನಗೆ ಇರುವ ಮುಖ್ಯವಾದ ಅಧಿಕಾರವೆಂದರೆ, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು ಸ್ಥಾಪಿತವಾದ ತರುಣದಲ್ಲಿ ಅದರ ಸದಸ್ಯರ ಮುಂದೆ ನಾನು ಕೊಟ್ಟ ಒಂದು ಉಪನ್ಯಾಸ; ಅದರಲ್ಲಿ ನಾನು ಮುಖ್ಯವಾಗಿ ವೆಂಕಟಾಚಾರ್ಯರ ಮತ್ತು ಗಳಗನಾಥರ ಐತಿಹಾಸಿಕ ಕಾದಂಬರಿಗಳನ್ನು ಶ್ಲಾಘಿಸಿ ಮೈಸೂರು ದೇಶದ ಚರಿತ್ರೆಯಮೇಲೂ ಅಂಥ ಕಾದಂಬರಿಗಳನ್ನು, ಅಥವಾ ನಾಟಕಗಳನ್ನು ಬರೆಯಲು ಉತ್ತಮವಾದ ಸಾಮಗ್ರಿ ಇದೆಯೆಂಬುದನ್ನು ವಿವರಿಸಿ, ಉದಾಹರಣೆಗಾಗಿ ಕೆಲವು ವಸ್ತುಗಳನ್ನು ತೋರಿಸಿದೆನು.

ಅವುಗಳಲ್ಲಿ ಇದು ಒಂದು:—

"ಬಿದುರೂರಿನ ಬಸಪ್ಪನಾಯಕನು ೧೭೫೫ ರಲ್ಲಿ ಕಾಲವಾಗಲು ಅವನ ಹೆಂಡತಿಯೂ ಚೆನ್ನಬಸವಯ್ಯನೆಂಬ ಅವನ ದತ್ತಪುತ್ರನೂ ರಾಜ್ಯವನ್ನು ನೋಡಿಕೊಳ್ಳುತ್ತಿದ್ದರು. ರಾಣಿಯು ನಿಂಬಯ್ಯನೆಂಬವನನ್ನು ಕಟ್ಟಿಕೊಂಡು ದುರ್ನಡತೆಗೆ ಬಿದ್ದಿದ್ದಳು. ಇದು ಆಕೆಯ ಮಗನಿಗೆ ತಿಳಿದು ಅವನು ಆಕ್ಷೇಪಿಸಿದನು. ಆದ್ದರಿಂದ ಇವನ ಕಾಟವೇ ಇಲ್ಲದಂತೆ ಮಾಡಿಕೊಳ್ಳುವುದು ಉತ್ತಮವೆಂದು ಯೋಚಿಸಿ ಅವರಿಬ್ಬರೂ ಒಬ್ಬ ಜಟ್ಟಿಯನ್ನು ಗೊತ್ತುಮಾಡಿ ಅವನಿಂದ ಚೆನ್ನಬಸವಯ್ಯನನ್ನು ಕತ್ತುಮುರಿಸಿ ಕೊಲ್ಲಿಸಿದರು. ಸೋಮಶೇಖರನೆಂಬ ಮತ್ತೊಬ್ಬ ಹುಡುಗನು ದತ್ತುವಾದನು.

ಹೀಗಿರಲು ಒಬ್ಬನು ಹೈದರನನ್ನು ಕಂಡು ತಾನು ಚೆನ್ನಬಸವಯ್ಯನೆಂದೂ, ಜಟ್ಟಿಯು ತನ್ನನ್ನು ಕೊಲ್ಲದೆ ಬಿಡಲು ತಾನು ಬದುಕಿಬಂದೆನೆಂದೂ, ತನಗೆ ಸಹಾಯಮಾಡಿ ಬಿದುರೂರು

ಸಂಸ್ಥಾನವನ್ನು ಕೊಡಿಸಬೇಕೆಂದೂ ಬಂದು ಹೇಳಿಕೊಂಡನು. ಹೈದರನಿಗೆ ಇಷ್ಟು ನೆಪ ಸಿಕ್ಕಿದ್ದೇ ಸಾಕು. ಅವನು ಸೈನ್ಯವನ್ನು ತೆಗೆದುಕೊಂಡು ಹೊರಟು ಚೆನ್ನಬಸವಯ್ಯನನ್ನು ಉದ್ಧಾರಮಾಡುವೆನೆಂದು ಹೇಳುತ್ತ ಬಿದುರೂರು ಸಂಸ್ಥಾನದ ಹತ್ತಿರಕ್ಕೆ ಬಂದು ಅಲ್ಲಿನ ಪ್ರಜೆಗಳಿಗೆ ತಮ್ಮ ರಾಜನನ್ನು ಸ್ವೀಕರಿಸಬೇಕೆಂದು ಹೇಳಿಕಳುಹಿಸಿದನು. ಶಿವಮೊಗ್ಗೆಯು ಹೈದರನ ಸ್ವಾಧೀನವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಲಕ್ಷ ವರಹವುಳ್ಳ ನಿಧಿಯು ಸಿಕ್ಕಲು, ಅದರಲ್ಲಿ ಒಂದು ಲಕ್ಷ ರೂಪಾಯಿಗಳಷ್ಟನ್ನು ತನ್ನ ಸೈನಿಕರಿಗೆ ಹಂಚಿ ಅವರನ್ನು ಉತ್ಸಾಹಗೊಳಿಸಿದನು. ಈಗ ಅವನು ಹಿಂತಿರುಗಿ ಹೊರಟುಹೋಗುವುದಾದರೆ ನಾಲ್ಕು ಲಕ್ಷ ವರಹಗಳನ್ನು ಕೊಡುವುದಾಗಿ ರಾಣಿಯು ಹೇಳಿಕಳುಹಿಸಿದಳು. ಆದರೆ ಅದಕ್ಕೆ ನವಾಬನು ಒಪ್ಪಲಿಲ್ಲ. ಕುಂಸಿಗೆ ಬಂದಾಗ, ಅಲ್ಲಿ ಹಿಂದಿನ ರಾಜನ ಹತ್ತಿರ ಮಂತ್ರಿಯಾಗಿದ್ದು ಈಗ ಸೆರೆಯಲ್ಲಿದ್ದ ಲಿಂಗಣ್ಣನು ದೊರಕಿ, ತಾನು ದೇಶದ ಸ್ವರೂಪ ಸ್ವಭಾವಗಳನ್ನೆಲ್ಲಾ ತಿಳಿಸುವುದಾಗಿಯೂ ಯಾವ ತೊಂದರೆಯೂ ಇಲ್ಲದಂತೆ ಅವನನ್ನು ಗುಪ್ತಮಾರ್ಗದಿಂದ ಬಿದುರೂರಿನ ಕೋಟೆಯೊಳಕ್ಕೆ ಕರೆದುಕೊಂಡು ಹೋಗುವುದಾಗಿಯೂ ಮಾತುಕೊಟ್ಟನು. ಮುಂದಕ್ಕೆ ಏಟೂರಿನಮೇಲೆ ಹೋಗುತ್ತಿರಲು ಅಲ್ಲಿದ್ದ ಕಾವಲುಗಾರರು ಸೈನ್ಯದ ಮೇಲೆ ಗುಂಡು ಹಾರಿಸಿದರು. ಹೈದರನು ಅವರನ್ನು ಸೋಲಿಸಿ ಅವರ ಕಿವಿ ಮೂಗುಗಳನ್ನು ಕುಯ್ಯಿಸಿ ಓಡಿಸಿದನು. ಅವನು ಅನಂತಪುರದ ಹತ್ತಿರಕ್ಕೆ ಬಂದಾಗ, ರಾಣಿಯು ಹನ್ನೆರಡು ಲಕ್ಷ ವರಹಗಳನ್ನು ಕೊಡುವುದಾಗಿಯೂ, ರಾಜಧಾನಿಯ ಹತ್ತಿರಕ್ಕೆ ಬಂದಾಗ, ಹದಿನೆಂಟು ಲಕ್ಷ ವರಹಗಳನ್ನು ಕೊಡುವುದಾಗಿಯೂ, ಅದನ್ನು ತೆಗೆದುಕೊಂಡು ಅವನು ಹೊರಟುಹೋಗಬೇಕೆಂದೂ ಹೇಳಿಕಳುಹಿಸಿದಳು. ಆದರೆ ಹೈದರನು ಇದು ಯಾವುದಕ್ಕೂ ಒಪ್ಪಲಿಲ್ಲ.

ಇದರಿಂದ ರಾಣಿಗೂ, ಅವಳ ಇನಿಯನಿಗೂ ಹೆದರಿಕೆಯುಂಟಾಗಿ ಇಬ್ಬರೂ ಬಲ್ಲಾಳರಾಯನದುರ್ಗಕ್ಕೆ ಓಡಿಹೋದರು. ಆದರೆ ಹೋಗುವುದಕ್ಕೆ ಮುಂಚೆ ರಾಣಿಯು ಅಲ್ಲಿದ್ದ ಭಂಡಾರವನ್ನು ಬೇರೆ ಕಡೆಗೆ ಸಾಗಿಸಬೇಕೆಂದೂ, ಅಷ್ಟಕ್ಕೆ ಅವಕಾಶವಿಲ್ಲದಿದ್ದರೆ ಅರಮನೆಗೂ ಖಜಾನೆಗೂ ಬೆಂಕಿ ಇಡಬೇಕೆಂದೂ ಹೇಳಿ ಅದೇ ಕೆಲಸಕ್ಕೆ ಕೆಲವರನ್ನು ನೇಮಕಮಾಡಿ ಹೋಗಿದ್ದಳು.

ಹೈದರನು ಬಂದು ರಾಜಧಾನಿಯನ್ನು ಮುಂದುಗಡೆಯಿಂದ ಮುತ್ತುವಂತೆ ನಟಿಸುತ್ತ, ಲಿಂಗಣ್ಣನು ತೋರಿಸಿದ ಗುಪ್ತಮಾರ್ಗವನ್ನು ಹಿಡಿದು ಹಿಂದುಗಡೆಯಿಂದ ಊರಿಗೆ ಪ್ರವೇಶಮಾಡಿದನು. ಕೂಡಲೆ ರಾಣಿಯು ಗೊತ್ತುಮಾಡಿದ್ದ ಜನರು ಅರಮನೆಗೆ ಬೆಂಕಿಯನ್ನು ಹತ್ತಿಸಿಬಿಟ್ಟರು. ಹಿಂದೆ ಇಂಥ ಅವಾಂತರವನ್ನೇ ಕಂಡು ಅರಿಯದ ಪ್ರಜೆಗಳು ಈಗ ಗಾಬರಿಯಿಂದ ಚೆಲ್ಲಾಪಿಲ್ಲಿಯಾಗಿ ಹತ್ತಿರದಲ್ಲಿದ್ದ ಕಾಡುಗಳಿಗೂ ಗುಡ್ಡಗಳಿಗೂ ಓಡಿಹೋಗಿ ಅವಿತುಕೊಂಡರು. ಕುಬೇರನ ಪಟ್ಟಣದಂತಿದ್ದ ಆ ಊರು ದಿಕ್ಕೇ ಇಲ್ಲದಂತಾಗಿ ಹೈದರನ ಕೈವಶವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಕೋಟಿಯೂ ಇಪ್ಪತ್ತು ಲಕ್ಷ ಪೌಂಡಿನಷ್ಟು ದ್ರವ್ಯ ಸಿಕ್ಕಿತೆಂದು ಹೇಳುತ್ತಾರೆ.

ಅನಂತರ ಚೆನ್ನಬಸವಯ್ಯನು ನಿಜವಾದವನಲ್ಲವೆಂದು ತಿಳಿದುಬಂದಂತೆ ಮಾಡಿ, ಹೈದರನು ಅವನನ್ನೂ, ರಾಣಿ, ನಿಂಬಯ್ಯ, ಸೋಮಶೇಖರ ಇವರನ್ನೂ ಮದ್ದಗಿರಿಯ ದುರ್ಗದಲ್ಲಿ ಸೆರೆಯಿಡಿಸಿದನು.

(ವಿಲ್ಕ್ಸನವರ ಮೈಸೂರು ಚರಿತ್ರೆ--ಮೊದಲನೆಯ ಭಾಗ, ಪುಟ ೪೪೭-೪೫೩)

ಈ ವೃತ್ತಾಂತವನ್ನು ಬೇಕಾದರೆ, 'ಹ್ಯಾಂಲೆಟ್‌ನಂಥ ಕಥೆಯಾಗಿ ಮಾಡಬಹುದಲ್ಲವೇ?''

ಇಂಥ ಇನ್ನು ಕೆಲವು ವಸ್ತುಗಳನ್ನೂ, ಅವುಗಳನ್ನು ಉಪಯೋಗಿಸಿಕೊಳ್ಳ ಬಹುದಾದ ರೀತಿಯನ್ನೂ, ಸೂಚಿಸಿ ಆ ಉಪನ್ಯಾಸವನ್ನು ಹೀಗೆ ಮುಗಿಸಿದೆನು:—

"ಕನ್ನಡಿಗರು ಹೀಗೆ ಮೈಸೂರು ದೇಶದ ಚರಿತ್ರೆಯನ್ನು ಆಸಡ್ಡೆ ಮಾಡಿಯಾದರೂ ಅದರ ಮೇಲಣ ಕಥೆಗಳನ್ನೂ ಕಾದಂಬರಿಗಳನ್ನೂ ಓದಬೇಕೆನ್ನುವ ಹಾಗಾಗುವುದೇ?—ಆ ಕಾಲವು ಬರುವುದು ಯಾವಾಗ?"*

ಆ ಕಾಲ ಬರುವುದಕ್ಕೆ ಹೆಚ್ಚು ದಿನ ಕಾಯಬೇಕಾಗಲಿಲ್ಲ. ಏಕೆಂದರೆ, ಈ ಉಪನ್ಯಾಸವು ಬಂದಮೇಲೆ ಮ|| ಗಳಾದ ಎಂ. ಎಸ್. ರಾಮುಸ್ವಾಮಿ, ಎಂ.ಎ., "ಸಂಸ", ಜಿ. ಸದಾಶಿವಯ್ಯ, ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ., ಮುಂತಾದವರು ದೇಶಾಭಿಮಾನದಿಂದ ಉದ್ದೀಪ್ತರಾಗಿ ಮೈಸೂರು ಚರಿತ್ರೆಗೆ ಸಂಬಂಧಪಟ್ಟ ನಾಟಕಗಳನ್ನು ಬರೆದರು. ಆದರೆ ಅವುಗಳಲ್ಲಿ ಯಾವುದೂ, ನನಗೆ ತಿಳಿದಂತೆ, ನನ್ನ ಆ ಉಪನ್ಯಾಸದಿಂದ ಪ್ರೇರಿತವಾದದ್ದಲ್ಲ. ಅದನ್ನು ಉಪಯೋಗಿಸಿಕೊಂಡವರಲ್ಲಿ ಮೊದಲನೆಯವರು ಮ|| ಪುಟ್ಟಪ್ಪನವರು. ಅವರ ಈ "ರಕ್ತಾಕ್ಷಿ"ಗೆ ಮೇಲೆ ಅನುವಾದ ಮಾಡಿದ ನಿಂಬಯ್ಯ ಚೆನ್ನಬಸವಯ್ಯ ಇವರ ಬಿದನೂರು ಕಥೆಯೇ ಮೂಲ.

ಹಿಂದಿನ ಸಾಹಿತ್ಯದಲ್ಲಿ ಚರಿತ್ರೆಯೂ, ಚರಿತ್ರೆಯ ಮೇಲಣ ಕಾವ್ಯಗಳೂ ಇಲ್ಲ; 'ಚಿಕ್ಕದೇವರಾಯ ವಂಶಾವಳಿ'ಯಂಥ ಗ್ರಂಥವಿದ್ದರೆ ಎಲ್ಲೋ ಒಂದೆರಡು. ಏಕೆಂದರೆ, ನಮ್ಮ ಜನಕ್ಕೆ ಪುರಾಣವೇ 'ಚರಿತ್ರೆ'; ಪೌರಾಣಿಕ ಗ್ರಂಥವೇ ಐತಿಹಾಸಿಕ ಕಾವ್ಯ. ದರ್ಶನಗಳು ಸಪ್ರಮಾಣವಾಗಿರಬೇಕೆಂದು ಸರ್ವಪ್ರಯತ್ನ ಮಾಡಿದ ಪ್ರಾಚೀನ ಭಾರತೀಯರಿಗೆ ತಮ್ಮ ಚರಿತ್ರೆಯೂ ಸಪ್ರಮಾಣವಾಗಿರಬೇಕೆಂಬ ಯೋಚನೆ ಏಕೆ ಬರಲಿಲ್ಲವೋ! ಪ್ರಾಯಶಃ ಅವರು, ಈಗ ನಾವು "ಚರಿತ್ರೆ" ಎನ್ನುವ ಗ್ರಂಥಜಾತಿಗೇ ಹೆಚ್ಚು ಗಮನಕೊಟ್ಟಿರಲಿಲ್ಲವೆಂದು ತೋರುತ್ತದೆ. ಅಂತೂ ಇಂದಿಗೂ ಜನಸಾಮಾನ್ಯರು ವಿದ್ವತ್ಪೂರ್ಣವಾದ, ಟಿಪ್ಪಣಿಗಳಿಂದ ತುಂಬಿದ, ವಿನ್‌ಸೆಂಟ್ ಸ್ಮಿತ್ ಸಾಹೇಬನ ಹಿಂದೂಚರಿತ್ರೆಯನ್ನು ಓದರು; ಅದರ ಮೇಲಿನ ಉಪನ್ಯಾಸಗಳನ್ನು ಕೇಳರು; ಅದಕ್ಕೆ ಬದಲಾಗಿ ರಾಮಾಯಣ ಭಾರತ ಭಾಗವತಗಳನ್ನು ಓದಿ, ಕೇಳಿ, ಪಟ್ಟಾಭಿಷೇಕ ನಡೆಸಿ, ತಮಗೇ ಪಟ್ಟಾಭಿಷೇಕವಾದದ್ದಕ್ಕಿಂತ ಹೆಚ್ಚಾಗಿ ಸಂತೋಷಪಟ್ಟು ಬಿಡುವರು.

ಆದರೆ ಆ ಕಾಲ ಬದಲಾಯಿಸುತ್ತಿದೆ. ಈಗ ನಾವು ವ್ಯವಹಾರಜ್ಞರಾದ ಇಂಗ್ಲಿಷರ ನೆರಳಿನಲ್ಲಿದ್ದೇವೆ; ವಿಜ್ಞಾನಯುಗದಲ್ಲಿದ್ದೇವೆ. ಅದರ ಫಲವಾಗಿ ಪುರಾಣದ ಸ್ಥಾನದಲ್ಲಿ ಚರಿತ್ರೆ ಬರುತ್ತಿದೆ; ಚರಿತ್ರೆಯನ್ನು, ನಮ್ಮ ದೇಶದ ಮತ್ತು ದೇಶವಿದೇಶಗಳ ಚರಿತ್ರೆಯನ್ನು, ಓದಿ, ವಸ್ತುಸ್ಥಿತಿಯನ್ನು ಎಲ್ಲರೂ ತಿಳಿದು

* 'ಪ್ರಬುದ್ಧ ಕರ್ಣಾಟಕ', ೧೯೨೨, ಕಾರ್ತಿಕದ ಸಂಚಿಕೆ.

ಕೊಳ್ಳುವಂತಾಗಿದೆ. ಹಿಂದಿನ ಮತ್ತು ಇಂದಿನ ಸರಿಯಾದ ಚರಿತ್ರೆಯನ್ನು ತಿಳಿದದ್ದೇ ಈಗಿನ ಉಜ್ಜ್ವಲವಾದ ದೇಶಾಭಿಮಾನಕ್ಕೂ ಬಹುಮುಖವಾದ ನವಜೀವ ಸಂಚಾರಕ್ಕೂ ಕಾರಣವಾಗಿದೆ. ಈಗ ಒಬ್ಬ ಪಾಳೆಗಾರನ ಆಳಿಕೆಯಲ್ಲಿ ಇರುವ ಆಸಕ್ತಿಯು, ಸಹಸ್ರಕಂಠ ರಾವಣನನ್ನು ಕೊಲ್ಲುವ ಸೀತೆಯ ಅದ್ಭುತ ವೃತ್ತಾಂತದಲ್ಲಿರುವುದಿಲ್ಲ. ಹೀಗೆ ತಾತ್ತ್ವಿಕ ವಸ್ತುಸ್ಥಿತಿಯ ಕಥನವೇ ಜೈತನ್ಯ ವಾಗಿರುವ ಚರಿತ್ರೆಯನ್ನು ಪಡೆದು ಪ್ರಚಾರಕ್ಕೆ ತಂದ ವೈಜ್ಞಾನಿಕ ಮನೋ ವೃತ್ತಿಯು ಸಾಹಿತ್ಯಕ್ಕೂ ಪ್ರವೇಶಿಸಿ ಆಧುನಿಕಸಾಹಿತ್ಯಸ್ವರೂಪವನ್ನು ಮಾರ್ಪಡಿಸುತ್ತಿದೆ.—ಐತಿಹಾಸಿಕ ಕಥೆ ಕಾದಂಬರಿ ನಾಟಕಾದಿಗಳು ಹುಟ್ಟು ತ್ತಿವೆ; ಕಾವ್ಯಗಳಲ್ಲಿ ಸ್ವಭಾವೋಕ್ತಿ ಸರಳತೆ ಸ್ವಾಭಾವಿಕತೆಗಳಿಗೆ ಪ್ರಾಶಸ್ತ್ಯ ಬರುತ್ತಿದೆ; ಸಾಮಾಜಿಕ ವಸ್ತುಗಳೂ ನೈಸರ್ಗಿಕವಾದ ಭಾಷಾ ಶೈಲಿಗಳೂ ಪ್ರಿಯವಾಗುತ್ತಿವೆ.

ಸಾಹಿತ್ಯವು ಸ್ವಾಭಾವಿಕವಾಗಿದ್ದಷ್ಟೂ ಅದರ ಪರಿಣಾಮವು ಫಲಕಾರಿಯಾಗು ತ್ತದೆ. ಓದುಗರು ತಾವು ಓದುವ ಕೇಳುವ ವಿಷಯಗಳು ತಮಗೆ ಸಂಬಂಧ ಪಟ್ಟವು, ತಮಗೆ ಸಾಧ್ಯವಾದವು ಎಂದು ಅರಿತಾಗ ಅವರ ಅಂತಃಕರಣವು ಅವುಗಳಿಂದ ಪರಿಪಾಕಗೊಳ್ಳುತ್ತದೆ. ಹಾಗಲ್ಲದೆ ಬರಿಯ ದೇವದಾನವ ಗಂಧ ರ್ವರ ಅದ್ಭುತ ಕಥೆಗಳಾದರೆ, ಅವುಗಳಿಂದ ತಾತ್ಕಾಲಿಕವಾಗಿ ಆಗುವ ಬೆರಗೇ ಮುಖ್ಯಫಲ. ಪುರಾಣಗಳೂ ಪೌರಾಣಿಕ ಕಾವ್ಯಗಳೂ ಜನಪ್ರಿಯವಾಗುವುದಕ್ಕೆ ಪ್ರಧಾನವಾದ ಒಂದು ಕಾರಣವಾವುದೆಂದರೆ, ಅವು ಜನಸಾಮಾನ್ಯದ ಕಷ್ಟ ಸುಖಗಳಲ್ಲಿ ದಾರಿ ತೋರುವಂಥ ಮಹಾ ಪುರುಷರ ಮಾತು ಕಥೆ ಮೇಲ್ಪಂಕ್ತಿ ಗಳನ್ನು ಸರಸ ಕಥಾರೂಪದಲ್ಲಿ ವಿವರಿಸುವುದು. ಈ ದೃಷ್ಟಿಯಿಂದ ನೋಡಿದರೆ ಅವೂ ಉತ್ತಮವಾದ ಕಾವ್ಯಗಳೇ. ಈ ಕಾವ್ಯಾಂಶವು, ಇವು ಎಷ್ಟರಮಟ್ಟಿಗೆ ಮಾನವಮನೋಭಾವ ವ್ಯಾವಹಾರಿಕ ಜನಜೀವಿತಗಳಿಗೆ ಸಂಬಂಧಪಟ್ಟಿರುತ್ತವೆ, ಎಷ್ಟರಮಟ್ಟಿಗೆ ನಿಜತ್ವಭ್ರಾಂತಿಯುಂಟುಮಾಡಬಲ್ಲ ತಾತ್ತ್ವಿಕ ಭಿತ್ತಿಯಲ್ಲಿ ಕುಶಲತೆಯಿಂದ ಕೆತ್ತಲ್ಪಟ್ಟಿವೆ ಎಂಬುದರ ಮೇಲೆ ಹೋಗುತ್ತದೆ. ಹೀಗಿರುವಾಗ ಮಾನವನ ಮನೋವೃತ್ತಿಯನ್ನು ತಿದ್ದುವುದಕ್ಕೂ ಜನಜೀವನವನ್ನು ಸಂಸ್ಕಾರ ಗೊಳಿಸುವುದಕ್ಕೂ ಚರಿತ್ರೆಯಿಂದ, ಉತ್ತಮರೀತಿಯಲ್ಲಿ ಬರೆದ ಚರಿತ್ರೆಯಿಂದ, ಎಷ್ಟು ಸಹಾಯವಾಗುತ್ತದೆಂದು ಹೇಳಬೇಕಾಗಿಲ್ಲ. ಪುರಾಣವು ಕಾಳನ್ನೂ ಜಳ್ಳನ್ನೂ ಬೆರಕೆಮಾಡಿಟ್ಟು ಬಣ್ಣ ಕಟ್ಟಿದ ಚರಿತ್ರೆಯಾದರೆ, ಚರಿತ್ರೆಯು ಶೋಧಿ ಸಿದ್ದ ಪುರಾಣ; ಕಸ ಹೋದ ರಸ. ಅದರಲ್ಲಿ, ಕೆಲವು ವೇಳೆ, ಕವಿ ಕಲ್ಪನೆಗೇ ಅಸಾಧ್ಯವಾದ ಅನರ್ಘ್ಯ ವಸ್ತುಗಳು, ಗಣಿಯಲ್ಲಿ ರತ್ನವಿರುವಂತೆ, ದೇವಸೃಷ್ಟ ವಾಗಿ ಸಿದ್ಧವಾಗಿರುತ್ತವೆ; ಅವು ತಕ್ಕ ಕೆಲಸಗಾರನ ಕೈಗೆ ಸಿಕ್ಕಿ ಸಾಣೆಯಲ್ಲಿ

ಬಹುಮುಖವಡೆದು, ಕಾಂತಿಗೊಂಡು, ಹೊಂದಿಕೆಯಾದ ಇತರ ರತ್ನಗಳೊಡನೆ ಸೇರಿ ಬಂಗಾರದಲ್ಲಿ ಕೂಡಿಕೊಂಡರೆ ದಿವ್ಯವಾದ ಆಭರಣಗಳಾಗುತ್ತವೆ. ಸರ್ ವಾಲ್ಟರ್ ಸ್ಕಾಟ್, ಬಂಕಿಂಚಂದ್ರ, ಹರಿನಾರಾಯಣ ಆಪ್ಟೆ—ಇವರು ಬರೆದಿರುವ ಐತಿಹಾಸಿಕ ಕಾದಂಬರಿಗಳು ಇಂಥ ದಿವ್ಯಾಭರಣಗಳು. ಅವುಗಳ ಕಥಾಂಶಗಳು ಒಂದೊಂದೂ ಒಂದೊಂದು ರತ್ನ. ಇವುಗಳನ್ನು ಒಡವೆಯಾಗಿ ಮಾಡಿರುವುದರಲ್ಲಿ ಅವರ ಜಾಣ್ಮೆಯೆಷ್ಟೋ, ಅಷ್ಟೇ ಜಾಣ್ಮೆಯು ಈ ರತ್ನಗಳನ್ನು ಕಂಡುಕೊಂಡು, ಹೊಂದಿಕೆಯಾಗಿ ಜೋಡಿಸಿಕೊಂಡಿರುವುದರಲ್ಲಿಯೂ ಇದೆ.

ಆದರೆ ಇವು ಪುರಾಣಗಳಲ್ಲ; ಕಲ್ಪಿತಾಂಶಗಳನ್ನೊಳಕೊಂಡಿದ್ದರೂ ಇವು ಪುರಾಣಗಳಂತೆ ಅತಿಮಾನುಷ ಪ್ರಪಂಚವನ್ನು ಸೃಷ್ಟಿಸುವುದಿಲ್ಲ; ಆದ್ದರಿಂದ ಇವು ಚರಿತ್ರೆಯ ವ್ಯಾಸಂಗಕ್ಕೆ ಸಹಾಯಕವೇ ಆಗುತ್ತವೆ. ಚರಿತ್ರೆಯ ಪಾಠಕ್ಕೆಂದು ನಿಯಮಿಸಿರುವ ಕೆಲವು ಶುಷ್ಕ ಪಠ್ಯಪುಸ್ತಕಗಳನ್ನು ಓದಿದರೆ ಎಷ್ಟು ಬೇಸರವಾಗುತ್ತದೆಂಬುದನ್ನು ಚರಿತ್ರೆಯ ವಿದ್ಯಾರ್ಥಿಗಳಾಗಿದ್ದವರು ಬಲ್ಲರು. ಅದು ನುಂಗಲಾರದ ಔಷಧ. ಈ ತತ್ತ್ವವನ್ನು ಗ್ರಹಿಸಿಯೇ ಚಿಕ್ಕ ಹುಡುಗರಿಗೆ ಚರಿತ್ರೆಯನ್ನು ಕಥೆಗಳ ರೂಪದಲ್ಲಿ ಹೇಳಿಕೊಡುತ್ತಾರೆ. ದೊಡ್ಡವರು ಬೆಳೆದ ಹುಡುಗರು; ಅವರಿಗೂ ಚರಿತ್ರೆ ಚೆನ್ನಾಗಿ ತಿಳಿಯಬೇಕು, ಜ್ಞಾಪಕದಲ್ಲಿ ನಿಲ್ಲಬೇಕು. ಅದರಿಂದ ಸತ್ಪರಿಣಾಮವಾಗಬೇಕು—ಎಂಬುದನ್ನೊಪ್ಪಿದರೆ, ಚರಿತ್ರೆಯ ವ್ಯಾಸಂಗವು ಇನ್ನೂ ಉತ್ತಮ ಗ್ರಂಥಗಳ ಮೂಲಕ ನಡೆಯಬೇಕು; ಅದಕ್ಕೆ ಐತಿಹಾಸಿಕ ಕಥೆಗಳ, ಕಾದಂಬರಿಗಳ, ನಾಟಕಗಳ ಬೆಂಬಲವು ಹೆಚ್ಚಾಗಬೇಕು. ಅಂಥ ಕಾದಂಬರಿಗಳೂ ನಾಟಕಗಳೂ ಹುಟ್ಟಲು ನಮ್ಮಲ್ಲಿ ಸೀಸರ್ ನೆಪೋಲಿಯನರು ಇಲ್ಲವೆಂದು ಕೊರಗಬೇಕಾಗಿಲ್ಲ; ಹಿಂದೂದೇಶವನ್ನು ಬಿಟ್ಟು ಕರ್ಣಾಟಕವನ್ನು ತೆಗೆದುಕೊಂಡರೂ, ಬರಿಯ ಮೈಸೂರನ್ನೇ ತೆಗೆದುಕೊಂಡರೂ, ನಮ್ಮಲ್ಲಿರುವಷ್ಟು ಚರಿತ್ರೆ ಇದ್ದೇ ಇದೆ. ಇಲ್ಲವೆಂದೇ ಎನ್ನೋಣ; ಹೊಗಳಿಕೊಳ್ಳುವುದಕ್ಕೆ ಐಶ್ವರ್ಯವಿಲ್ಲದಿದ್ದರೆ ಹೇಳಿಕೊಳ್ಳುವುದಕ್ಕೆ ಬಡತನವೂ ಇಲ್ಲವೆ? ಈಗ ಪ್ರಪಂಚದ ಹಲವು ದೇಶಗಳಲ್ಲಿ ನಾನಾ ವಿಧವಾದ ಚಳುವಳಿಗಳಿಗೆ ಹೇಗೋ ಹಾಗೆ ಸಾಹಿತ್ಯಕ್ಕೂ ಬಡತನವೇ ಸ್ಫೂರ್ತಿಯನ್ನು ಕೊಟ್ಟಿದೆ. ಬಲ್ಲವನ ಕೈಗೆ ಸಿಕ್ಕಿದರೆ ಇದ್ದಿಲೂ ಬಿರುಸಿನ ಮದ್ದಾಗಬಹುದು, ಅಥವಾ ಹೊಳೆಯುವ ವಜ್ರವಾಗಬಹುದು.

ಈ ವೈಜ್ಞಾನಿಕ ಮನೋವೃತ್ತಿಯು ನಮ್ಮಲ್ಲಿ ಹುಟ್ಟಿ ಬೆಳೆದದ್ದು ಇಂಗ್ಲಿಷಿನ ವ್ಯಾಸಂಗದಿಂದ. ಇಂಗ್ಲಿಷ್ ಜನರ ಪ್ರಭುತ್ವದಿಂದ ದೇಶಕ್ಕೆ ಉಪಕಾರವಾಗಿರಲಿ ಅಪಕಾರವಾಗಿರಲಿ, ಇಂಗ್ಲಿಷ್ ಸಾಹಿತ್ಯದ ವ್ಯಾಸಂಗದಿಂದಂತೂ ನಮಗೆ, ನಮ್ಮ ಸಾಹಿತ್ಯಕ್ಕೆ, ಸಾಹಿತ್ಯವನ್ನು ನಿರ್ಮಾಣಮಾಡಲು ಬೇಕಾದ ಬುದ್ಧಿ

ಮಥನ ಮನಃಪರಿಪಾಕಗಳಿಗೆ, ಅಪಾರವಾದ ಉಪಕಾರವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ; ಪ್ರಮಾಣ ಪಟುಗಳೆನಿಸಿಕೊಂಡಿರುವ ನಮ್ಮ ನ್ಯಾಯವೇದಾಂತಾದಿ ದರ್ಶನಗಳೂ ಬುದ್ಧಿಗೆ ಶಿಕ್ಷಣವನ್ನೇನೋ ಕೊಟ್ಟಿವೆ; ಈಗಲೂ ಕೊಡುತ್ತವೆ. ಆದರೂ ಅವು ನಮ್ಮನ್ನು ಒಂದು ಸಂಕೀರ್ಣ ಪ್ರಪಂಚದಲ್ಲಿ ವಾದ ವಾಕ್ಯಾರ್ಥ ಕುಶಲರನ್ನಾಗಿ ಮಾಡಿಟ್ಟಿವೆ; ಕೂದಲೆಳೆಯನ್ನೂ ಸೀಳಬಲ್ಲ ತೀಕ್ಷ್ಣತೆ ಚಾತುರ್ಯಗಳನ್ನು ಸಂಪಾದಿಸಿಕೊಟ್ಟಿವೆ. ಸಂಸ್ಕೃತ ಶಾಸ್ತ್ರಗಳಲ್ಲಿ ಮಾತ್ರ ಘನವಾದ ಪಾಂಡಿತ್ಯವನ್ನು ಪಡೆದ ಕನ್ನಡಿಗನು, ತನ್ನ ಊರಿನ ಕೇರಿ ಕೇರಿ ಮನೆ ಮನೆ ಸಂದಿಗೊಂದಿಗಳನ್ನೆಲ್ಲಾ ಹೊಕ್ಕು ನೋಡಿ ಅದರ ಪರಿಚಯದಲ್ಲಿಯೇ ತಲೆ ನರೆತು ಹೋರಾಡುವ ಮುಪ್ಪಿನ ಪೌರಾಧಿಕಾರಿಯು ಹಾಗೆ; ಅವನ ಅನುಭವವು ಆ ಊರಿಗೆ ಅಮೋಘವಾದದ್ದೇ. ಆದರೆ, ಇಂಗ್ಲಿಷಿನಲ್ಲಿಯೂ ವಿಶಾಲವಾದ ವಿದ್ವತ್ತನ್ನು ಸಂಪಾದಿಸಿದವನು ದೇಶ ವಿದೇಶಗಳಲ್ಲಿ ಸಂಚಾರ ಮಾಡಿ, ಹಲವು ವಿಷಯಗಳನ್ನು ಸ್ವಂತವಾಗಿ ಅರಿತು, ಬಹು ಜನರೊಡನೆ ಕಲೆತು ಮಾತನಾಡಿ, ಪ್ರಪಂಚದ ಅನುಭವವನ್ನೇ ತನ್ನ ಊರಿಗೆ ಕೊಟ್ಟು ಅದನ್ನು ಬೆಳೆಸಬಲ್ಲಂಥವನು. ಈಗಿನ ಕಾಲದಲ್ಲಿ, ಮತ್ತೊಬ್ಬರು ನಮ್ಮಲ್ಲಿಗೆ ಬರದಂತೆ, ನಾವು ಮತ್ತೊಬ್ಬರನ್ನು ನೋಡದಂತೆ, ಎತ್ತರವಾದ ಗೋಡೆಗಳನ್ನು ಹಾಕಿಕೊಂಡರೆ—ಅದರಲ್ಲಿಯೂ ಶಾಸ್ತ್ರ ಸಾಹಿತ್ಯಗಳಲ್ಲಿ—ನಷ್ಟವು ನಮ್ಮದೇ ಹೊರತು ಜಗತ್ತಿನದಲ್ಲ. ಸಾಲದ್ದಕ್ಕೆ, ನಮ್ಮ ದೇಶದಲ್ಲಿ ಶಾಸ್ತ್ರಗಳು ಬೆಳೆಯುವುದು ನಿಂತುಹೋಗಿ ಎಷ್ಟೋ ದಿನವಾಗಿ ಹೋಗಿದೆ. ಅವುಗಳಲ್ಲಿ ಲೆಕ್ಕವಿಲ್ಲದಷ್ಟು ವೃತ್ತಿ, ವ್ಯಾಖ್ಯಾನ ಪರಿಷ್ಕಾರಾದಿಗಳು ನೆಲಸಿ, ಸ್ವತಂತ್ರ ವಿಚಾರಬುದ್ಧಿ ಎನ್ನುವುದೇ ಅಣಗಿಹೋಗಿ, ಅವು ಇನ್ನು ಹೂವು ಹಣ್ಣು ಬಿಡಲಾರದ ಮಹಾ ವೃಕ್ಷಗಳಂತಾಗಿವೆ. ಆದ್ದರಿಂದ, ಇನ್ನುಮೇಲೆ ಶುದ್ಧ ಸಂಸ್ಕೃತ ಪ್ರಪಂಚದಲ್ಲಿಯೇ ಶಿಕ್ಷಿತರಾಗಬಹುದಾದ ವಿದ್ವಾಂಸರು ಘನಪಂಜರದ ಮಧ್ಯದಲ್ಲಿ ಹುಟ್ಟಿ ಬೆಳೆದು ಬಾಳುವ ಸಿಂಹಗಳಂತಾಗುತ್ತಾರೆ. ಅವರಿಂದ ದಿಗ್ವಿಜಯವನ್ನು ಮಾಡಿಕೊಂಡುಬರುವುದಾಗಲಿ ರಾಜ್ಯವನ್ನು ಕಟ್ಟುವುದಾಗಲಿ ಜನವನ್ನು ಉಜ್ಜೀವಿತಗೊಳಿಸುವುದಾಗಲಿ ಸಾಧ್ಯವಿಲ್ಲ. ಬುದ್ಧ ಶಂಕರ ರಾಮಾನುಜ ವಿದ್ಯಾರಣ್ಯರ ಮಾತಿರಲಿ; ಅವರ ಕಾಲಕ್ಕೆ ನಮ್ಮ ದೇಶದಲ್ಲಿ ಇನ್ನೂ ಬುದ್ಧಿಗೆ ಸ್ವಾತಂತ್ರ್ಯವಿತ್ತು, ಸತ್ತ್ವವಿತ್ತು, ಆದ್ದರಿಂದ ಬೆಳವಣಿಗೆ ಇತ್ತು. ಜಗತ್ತೂ ಈಗಿನಷ್ಟು ಮುಂದುವರಿದಿರಲಿಲ್ಲ, ಜ್ಞಾನ ವಿಜ್ಞಾನಗಳು ವಿಕಸನಗೊಂಡಿರಲಿಲ್ಲ. ಈಚೆಗೆ ಆರ್ಯ ಸಂಸ್ಕೃತಿಯನ್ನು ಮಂಜು ಮುಸುಕಿತು; ಅದರ ಬೆಳವಣಿಗೆ ನಿಂತಿತು. ಆದರೆ ಬಾಹ್ಯ ಜಗತ್ತಿನಲ್ಲಿ ವಿಜ್ಞಾನಯುಗವು ಆರಂಭವಾಗಿ ಯೂರೋಪ್ ಅಮೇರಿಕಾ ಖಂಡಗಳಲ್ಲಿ ನವಚೈತನ್ಯ ಉಂಟಾಯಿತು; ಜ್ಞಾನ ವಿಜ್ಞಾನಗಳು ಬಹು ಸ್ವಲ್ಪಕಾಲದಲ್ಲಿ

ಜಾಜ್ವಲ್ಯಮಾನವಾಗಿ ಬೆಳಗತೊಡಗಿದುವು. ಆದ್ದರಿಂದ, ಎಂಥ ಒಳ್ಳೆಯ ಎತ್ತಿನ ಗಾಡಿಯಾದರೂ ರೈಲನ್ನು ಹೇಗೆ ಹಿಂದೆ ಬೀಳಿಸಲಾರದೋ ಹಾಗೇ ಆರ್ಯ ಸಂಸ್ಕೃತಿಯ ವಿದ್ವತ್ತು ಒಂದೇ ಈಗ ಪಾಶ್ಚಾತ್ಯ ವೈಜ್ಞಾನಿಕ ಸಂಪತ್ತನ್ನು ಪೂರಿಸಲಾರದಂತಾಯಿತು. ಸ್ವಾಮಿ ವಿವೇಕಾನಂದರವರೂ, ಸರ್ ರಾಧಾಕೃಷ್ಣ ರವರೂ ಕೇವಲ ಭಾರತೀಯ ಶಾಸ್ತ್ರಪಾಂಡಿತ್ಯದಿಂದಲೇ ತಾವು ಪಡೆದ ದಿಗ್ವಿಜಯ ವನ್ನೂ ಲೋಕಸಂಗ್ರಹವನ್ನೂ ಎಂದಿಗೂ ಸಾಧಿಸುತ್ತಿರಲಿಲ್ಲ.

ಸಾಹಿತ್ಯದಲ್ಲಿಯೂ ಹೀಗೆಯೇ. ಇಂಗ್ಲಿಷ್ ಸಾಹಿತ್ಯವು, ಇಂಗ್ಲಿಷ್ ಭಾಷೆಯ ಮೂಲಕ ಪರಿಚಯವಾದ ವಿಶ್ವಸಾಹಿತ್ಯವು, ಆಧುನಿಕ ಕನ್ನಡ ಸಾಹಿತ್ಯಕ್ಕೆ, ಅಷ್ಟೇಕೆ ಆಧುನಿಕ ಸಕಲ ಭಾರತೀಯ ಸಾಹಿತ್ಯಕ್ಕೂ ಪ್ರಾಣದಾಯಕವಾಗಿದೆ. ರಘುವಂಶ ನೈಷಧಗಳನ್ನು ಓದಿ ರವೀಂದ್ರನಾಥರೂ, ಹರ್ಷಚರಿತೆ ಕಾದಂಬರಿ ಗಳನ್ನು ಓದಿ ಆಷ್ಟೆ ಬಂಕಿಂಚಂದ್ರರೂ ಎಂದಿಗೂ ಆಗುತ್ತಿರಲಿಲ್ಲ. ಹಾಗೆಯೇ ಶಾಕುಂತಲ ಪ್ರತಿಮಾನಾಟಕಗಳನ್ನು ಗಟ್ಟಿಮಾಡಿ ಪುಟ್ಟಪ್ಪನವರು "ರಕ್ತಾಕ್ಷಿ" ಯನ್ನು ಬರೆಯಲಾಗುತ್ತಿರಲಿಲ್ಲ. ಇದು ಷೇಕ್ಸ್‌ಪಿಯರ್ ಮಹಾಕವಿಯ ರೂಪಕ ರತ್ನಗಳಲ್ಲೊಂದಾದ 'ಹ್ಯಾಂಲೆಟ್'ನ ಸಾರವನ್ನು ಹೀರಿಕೊಂಡು ಅಪೂರ್ವ ತೇಜಸ್ಸಿನಿಂದ ಕಳಕಳಿಸುವ ಹೊಸ ಮಾದರಿಯ ಗ್ರಂಥವಾಗಿದೆ. ಇನ್ನುಮೇಲೆ ಸಂಸ್ಕೃತವು ಮುಪ್ಪಡಸಿದ ಕಾಮಧೇನುವಿನಂತೆ ಪೂಜಾಯೋಗ್ಯವೆಂದೂ ಸಾಹಿತ್ಯಶಿಶುಗಳಿಗೆ ಹಾಲು ಬೇಕಾದರೆ ನಾವು ಸೀಮೆಯ ಹಸುವಿನಂತಿರುವ ಇಂಗ್ಲಿಷನ್ನು ಸಾಕಿ ಕರೆದುಕೊಳ್ಳಬೇಕೆಂದೂ ಹೇಳುವ ಅನುಭವಶಾಲಿಗಳ ಮಾತನ್ನು ಮ|| ಪುಟ್ಟಪ್ಪನವರ ಕಾವ್ಯಗಳು ನಿರ್ವಿವಾದವಾಗಿ ನಿದರ್ಶಿಸುತ್ತವೆ.

ಇದು ಪಾಶ್ಚಾತ್ಯಜಾತಿಯ ರುದ್ರನಾಟಕ. ರುದ್ರನಾಟಕದ ರಮಣೀಯತೆ ಯೇನು, ಷೇಕ್ಸ್‌ಪಿಯರ್ ಕವಿಯ ರುದ್ರನಾಟಕಗಳ ವೈಲಕ್ಷಣ್ಯಗಳೇನು, ಹ್ಯಾಂಲೆಟ್ ನಾಟಕವನ್ನು ಪ್ರಕೃತ ಗ್ರಂಥಕ್ಕೆ ಅವರು ಯಾವ ರೀತಿಯಲ್ಲಿ ಉಪಯೋಗಿಸಿಕೊಂಡಿದ್ದಾರೆ, ಜೊತೆಗೆ ಅವರ ಕೈವಾಡವೆಷ್ಟಿದೆ, ಎಂಬುದನ್ನು ವಿವರಿಸುತ್ತ ಹೋದರೆ ಈಗಾಗಲೇ ವಿಸ್ತಾರವಾಗಿರುವ "ಮುನ್ನುಡಿ"ಯು ಹೋಗಿ "ಉಪೋದ್ಘಾತ"ವಾದೀತು. ಆದ್ದರಿಂದ ಈ ಕಾವ್ಯಸೌಧದ ತಳಹದಿ ಸಾಮುಗ್ರಿ ಕಟ್ಟಡದ ರೀತಿ ಚಿತ್ರಗೆಲಸ ಸುಣ್ಣ ಬಣ್ಣ ಮುಂತಾದ ಅಂಶಗಳ ನ್ನೊಂದನ್ನೂ ಇಲ್ಲಿ ಪ್ರಸ್ತಾಪಿಸುವುದಿಲ್ಲ. ಆದರೆ ಅದರ ರೂಪದ ಮೇಲೆ ಒಂದು ಮಾತು ಹೇಳಬೇಕೆನ್ನಿಸುತ್ತದೆ. ಮ|| ಪುಟ್ಟಪ್ಪನವರ "ಯಮನ ಸೋಲು" ಮುಂತಾದ ನಾಟಕಗಳನ್ನು ಓದಿದವರಿಗೆ ಅವರು ಉಪಯೋಗಿಸುತ್ತಿರುವ "ಸರಳ ರಗಳೆ"ಯ ಸ್ವರೂಪವು ಗೊತ್ತಾಗಿದೆ. ಇದು ಹೊಸದಾದರೂ ಹಳೆ ಯದೇ. ಹಿಂದೆ ಇದೇ ಅಂತ್ಯಪ್ರಾಸ ಸಹಿತವಾಗಿದ್ದರೆ "ಲಲಿತ ರಗಳೆ" ಎನ್ನಿಸಿ

ಕೊಳ್ಳುತ್ತಿತ್ತು. ಈಗ ಅದೇ ಪ್ರಾಸ ರಹಿತವಾಗಿ "ಸರಳ ರಗಳೆ" ಯಾಗಿದೆ. ಇದರಲ್ಲಿ ನಿಯತಾವಕಾಶವುಳ್ಳ ಕಂದ ವೃತ್ತಗಳಲ್ಲಿಲ್ಲದ ಅನುಕೂಲ್ಯಗಳು ಕೆಲವಿವೆ. ಇದರ ಧಾಟಿಯು, ಆಡುವ ಮಾತಿಸದಕ್ಕಿಂತ ಗಂಭೀರವಾಗಿಯೂ ಕಂದ ವೃತ್ತಗಳದಷ್ಟು ಪೆಡಸಲ್ಲದೆಯೂ, ಆದ್ದರಿಂದಲೇ, ಭಾವಗೌರವವಿರುವಾಗ ಹೆಚ್ಚು ಸ್ವಾಭಾವಿಕವಾಗಿಯೂ ಇರುತ್ತದೆ. ಹೀಗಿದ್ದುದ್ದರಿಂದ ತಾನೇ ಇಂಗ್ಲಿಷ್ ಸಾಹಿತ್ಯದಲ್ಲಿ, ಇಂಥ ಛಂದಸ್ಸು ಆರಂಭವಾಗುವುದೇ ತಡ, ಒಂದು ತಲೆಮಾರಿನಲ್ಲಿ ನೆಲಸಿ ನಿಂತುಬಿಟ್ಟಿತು. ಈಗಿನ ಕನ್ನಡ ಸಾಹಿತ್ಯದಲ್ಲಿಯೂ ಹೀಗೆಯೇ ಆಗುವುದೆಂದು ತೋರುತ್ತದೆ. ಈ ಧಾಟಿಯಲ್ಲಿ ಈಗಾಗಲೇ ಹಲವು ದೊಡ್ಡ ಪುಟ್ಟ ನಾಟಕಗಳು ಹುಟ್ಟಿವೆ. ಮ|| ಪುಟ್ಟಪ್ಪನವರು ಈ ನಾಟಕದಲ್ಲಿ ಭಾವಗೌರವ ಪಾತ್ರಸ್ವಭಾವಗಳನ್ನು ಅನುಸರಿಸಿ ರಗಳೆ ಗದ್ಯಗಳೆರಡನ್ನೂ ಉಪಯೋಗಿಸಿದ್ದಾರೆ. ಗೀತಗಳು ಬರುವೆಡೆಯಲ್ಲಿ ಅವುಗಳ ಛಂದಸ್ಸು ಬೇರೆಯಾಗುತ್ತದೆ.* ಷೇಕ್ಸ್‌ಪಿಯರ್ ಕವಿಯ ನಾಟಕಗಳಲ್ಲಿ ಇರುವುದೂ ಹೀಗೆಯೇ. ಇನ್ನು ಇಂಗ್ಲಿಷ್ ಸಾಹಿತ್ಯದ "ಬ್ಲ್ಯಾಂಕ್ ವರ್ಸ್"ಗೂ ಕನ್ನಡ 'ಸರಳ ರಗಳೆ"ಗೂ ಸಾಮ್ಯವೈಷಮ್ಯಗಳೇನು? ಮ|| ಪುಟ್ಟಪ್ಪನವರ ಛಂದಸ್ಸಿನಲ್ಲಿ ಲೋಪದೋಷಗಳಿವೆಯೇ?—ಎಂದು ವಿಚಾರಮಾಡುವುದು ಪ್ರಕೃತದಲ್ಲಿ ಆವಶ್ಯಕವಾಗಿ ತೋರುವುದಿಲ್ಲ. ಮಹಾಕವಿಗಳಿಗೆ ದಾರಿ ತೋರಿಸುವವರು ಯಾರು? ತೋರಿಸಿದರೂ ಅವರು ಆ ದಾರಿಯಲ್ಲಿ ಹೋಗುವರೇನು? ಏಕೆ ಹೋಗಬೇಕು? ವಸ್ತು ಚೆನ್ನಾಗಿದ್ದರೆ ಅದರ ಗುಣಾತಿಶಯದಲ್ಲಿ ಲೋಪಲೇಶಗಳು ಎಲ್ಲಿಯೋ ಅಡಗಿಹೋಗುವುವು. ಬುದ್ಧಿಪೂರ್ವಕವಾಗಿ ಮಾಡುವ ವ್ಯತ್ಯಾಸಗಳೂ ಉಂಟು. ಮುಂದೆ ಅವೇ "ವೈವಿಧ್ಯ', 'ವಿಶೇಷ' ಎನ್ನಿಸಿಕೊಳ್ಳಬಹುದು. ಭಾಷೆ ವ್ಯಾಕರಣ ಇವುಗಳಿಗೆ ಸಂಬಂಧಪಟ್ಟ ಎಷ್ಟು 'ಲೋಪ'ಗಳು ಹೀಗೆ ಕುಮಾರವ್ಯಾಸನ ಭಾರತ, ವೇದವ್ಯಾಸರ ಭಗವದ್ಗೀತೆಗಳಲ್ಲಿಯೇ ಇಲ್ಲ? ಇದರಿಂದ ನಾನು ಲೋಪದೋಷಗಳನ್ನು ಸಾಧಿಸುತ್ತಿದ್ದೇನೆಂದೂ, ಕತ್ತಲೆಯನ್ನು ಬೆಳಕೆಂದು ಕರೆಯುತ್ತಿದ್ದೇನೆಂದೂ, ಕವಿಯಾಗಲಿ, ಪಾಠಕರಾಗಲಿ ತಿಳಿಯಬಾರದು. ಹೊಸ ಪ್ರವಾಹ

---

* "ಬಿರುಗಾಳಿ"ಯನ್ನು ನೋಡಿ. "ರಕ್ತಾಕ್ಷಿ"ಯಲ್ಲಿ ಗೀತಗಳಿಲ್ಲ. ಹುಚ್ಚಿಯಾದ ರುದ್ರಾಂಬೆಯ ಮಾತು ಅಚ್ಚಾಗಿರುವ ರೀತಿಯನ್ನು ನೋಡಿ ಹೊಸ ಛಂದಸ್ಸಿನ ಅವಿಶ್ವಾಸಿಗಳು 'ಇದೂ ಒಂದು ಛಂದಸ್ಸೇನೊ!' ಎಂದು ಭ್ರಾಂತಿಪಡಬಹುದು, ಅಥವಾ ಅಲ್ಲಗಳೆಯಬಹುದು. ಇದರಲ್ಲಿ ಯಾವ ಛಂದಸ್ಸೂ ಇಲ್ಲ. ಇದು ಗದ್ಯ; ಭಾವ ಪ್ರಕಾಶನಕ್ಕೂ ಅಭಿನಯಕ್ಕೂ ಸೌಕರ್ಯವಾಗುವಂತೆ ತುಂಡು ತುಂಡು ಮಾಡಿ ಬರೆದ 'ಖಂಡ ಗದ್ಯ.' 'ಶ್ಮಶಾನ ಕುರುಕ್ಷೇತ್ರ'ದಲ್ಲಿ ಬರುವ ಕೌರವನ ಏಕಾಂತ ಭಾಷಣ, ಕುಂತಿಯ ಪ್ರಲಾಪ ಮುಂತಾದವುಗಳೂ ಹೀಗೆಯೇ.

ಒಂದಾಗ ಕಟ್ಟಿ ಕಿತ್ತುಹೋಗಬಹುದು, ಪಾತ್ರ ಏರಿಳಿ ಹರಿಯಬಹುದು, ಕಸಕಡ್ಡಿಗಳು ಕೊಚ್ಚಿಕೊಂಡು ಬರಬಹುದು; ಹೀಗೆಂದು ಅದನ್ನು ಅಡ್ಡಿಮಾಡುವುದ ಕ್ಕಾಗುತ್ತದೆಯೇ? ಕಷ್ಟಪಟ್ಟು, ಹೊಳೆಯನ್ನೇ ಬೇಕಾದರೆ ತಿರುಗಿಸಬಹುದು; ಅದೂ ಅನುಮಾನ. ಆಗ, ನಿಂತು ಕೊಳೆಯುತ್ತ ನಾರುತ್ತಿದ್ದ ನೀರೇ ಗತಿ. ಹಿಂದಿನ ಸಂಪ್ರದಾಯದಲ್ಲಿ ಹೆಚ್ಚು ದಿನ ಬಾಳಿ ಹೆಪ್ಪುಕಟ್ಟಿದವರು, ಬದಲಾವಣೆಯಾಗುತ್ತಿರುವಾಗ, ಅದನ್ನು ಕಂಡು ಕಳವಳಗೊಳ್ಳುವುದು ಸಹಜ. ಆದರೆ ಹಿಂದಿನ ಸಂಪ್ರದಾಯದಿಂದಲೇ ತ್ರೈಕಾಲಿಕವಾದ ಮಹಾ ಮಂಗಳವುಂಟಾಗುವುದೆಂದು ನಂಬಿ ಇಂದಿನವರೂ ಅದನ್ನು ಅಕ್ಷರಶಃ ನಡೆಸಲು ಪ್ರಯತ್ನಪಡುವುದಕ್ಕಿಂತ, ಒಟ್ಟಿನ ಮೇಲೆ ಈಗ ಹತ್ತು ಜನಕ್ಕೆ ಹಿತವಾಗುತ್ತದೆಂದು ಕಂಡುಬರುವ ಸಂಸ್ಕರಣಗಳನ್ನು, ಅಲ್ಪಸ್ವಲ್ಪ ದೋಷಗಳು ಇದ್ದರೂ ಇರಲಿ, ಅನುಸರಿಸುವುದು ಒಳ್ಳೆಯದು; ಅವು ಅನನುಕೂಲವಾದರೆ, ಮತ್ತೆ ಬದಲಾಯಿಸಿಕೊಳ್ಳೋಣ; ಇದೀಗ ಬೆಳವಣಿಗೆಯ, ಅಭಿವೃದ್ಧಿಯ ಲಕ್ಷಣ. ಮ|| ಪುಟ್ಟಪ್ಪನವರು ಇಂಥ ಹೊಸ ಸಂಸ್ಕರಣ ಮಾರ್ಗದಲ್ಲಿ ಹೋಗುತ್ತಿರುವ ಪರಕವಿಗಳು. ವ್ಯಾಕರಣ ಛಂದೋ ಲಕ್ಷಣಗಳಲ್ಲಿ ನಿರ್ದುಷ್ಟವಾಗಿರುವ ನೀರಸ ಚಂಪೂ ಕಾವ್ಯಗಳು ಬೇಕೇ, ಸಣ್ಣ ಪುಟ್ಟ ದೋಷಗಳಿದ್ದರಬಹುದಾದ, ಆದರೆ ರಸವತ್ತಾಗಿ, ನೂತನ ಭಾವ ಭಾಷಾ ಶೈಲಿ ಛಂದಸ್ಸುಗಳಿಂದ ಬುದ್ಧಿಯನ್ನು ಕುದುರಿಸಬಹುದಾದ, ಮನಸ್ಸನ್ನು ಉಲ್ಲಾಸಗೊಳಿಸಬಹುದಾದ, ಪುಟ್ಟಪ್ಪನವರ ಕಾವ್ಯಗಳಂಥ ಬರವಣಿಗೆ ಬೇಕೇ ಎಂದು ಕೇಳಿದರೆ, ಅದಕ್ಕೆ ಉತ್ತರವು ಒಂದೇ. ಅದೇನೆಂದು ಹೇಳಬೇಕಾಗಿಲ್ಲ.

ಶ್ರೀಮಾನ್ ಪುಟ್ಟಪ್ಪನವರು ಮಲೆನಾಡಿನ ಮಕ್ಕಳು. ಶಿವಮೊಗ್ಗೆಯ ಕರ್ಣಾಟಕ ಸಂಘದ ಸ್ಥಾಪಕರಲ್ಲಿ ಒಬ್ಬರು; ಅದರ ಮೂಲಕ "ಸಾಹಿತ್ಯ ಪ್ರಚಾರ"ವನ್ನು ನಡೆಸಿ ಅದರ ಪುರೋಭಿವೃದ್ಧಿಯಲ್ಲಿ ಆಸಕ್ತರಾಗಿರುವವರು. ಮಲೆನಾಡನ್ನು ತಮ್ಮ ಪದ್ಯ ಗದ್ಯ ನಾಟಕ ಗ್ರಂಥಗಳಲ್ಲಿ ಕೀರ್ತಿಸಿ ಅದನ್ನು ಅಮೃತವಾಗಿ ಮಾಡಿರುವವರು.—ಕಿಂದರಿಜೋಗಿಯ ಬೊಮ್ಮನಹಳ್ಳಿಯು ಇದ್ದದ್ದು ತುಂಗಾ ತೀರದ ಬಲಗಡೆಯಲ್ಲಿ; "ಬಿರುಗಾಳಿ" ಅವತರಿಸಿದ್ದು ಮಲೆನಾಡಿನ ಸೆರಗಿನಲ್ಲಿ; ಮಾಸು ಓಬು ಮೂರ್ತಿ ಕಿಟ್ಟು ಪುಟ್ಟು ಎಲ್ಲಾ ಮಲೆನಾಡಿನವರು; ರಕ್ತಾಕ್ಷಿಯ ಕಥೆಯೂ ಮಲೆನಾಡಿನದೇ—ಮಲೆನಾಡಿನ ಹೃದಯವಾದ ಬಿದನೂರು ಪ್ರಾಂತದ್ದು. ಆದ್ದರಿಂದ ಅವರ ಈ ಗ್ರಂಥವನ್ನು ಶಿವಮೊಗ್ಗೆಯ ಕರ್ಣಾಟಕ ಸಂಘದವರು ಪ್ರಕಟಿಸುವುದರಲ್ಲಿ ಔಚಿತ್ಯವಿದೆ. ಇಂಥ ಒಳ್ಳೆಯ ಕೃತಿಯನ್ನು ಪ್ರಕಟಿಸುವ ಸುಯೋಗ ಲಭಿಸಿದ್ದಕ್ಕಾಗಿ ನಾನು ಶಿವಮೊಗ್ಗೆಯ ಕರ್ಣಾಟಕ ಸಂಘವನ್ನು ಅಭಿನಂದಿಸುತ್ತೇನೆ. ಇದು ಕನ್ನಡಕ್ಕೆ

"ಹ್ಯಾಂಲೆಟ್" ಕಾವ್ಯ. ಇಂಗ್ಲಿಷಿನಲ್ಲಿ "ಹ್ಯಾಂಲೆಟ್" ಹುಟ್ಟಿದಾಗ ಅದರ ಸಾಹಿತ್ಯವು ಅತ್ಯುನ್ನತ ಶಿಖರವನ್ನೇರಿತು. "ರಕ್ತಾಕ್ಷಿ"ಯಂಥ ಶ್ಲಾಘ್ಯ ಸ್ವತಂತ್ರ ಐತಿಹಾಸಿಕ ನಾಟಕವು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿದಾಗ ಅದರ ಮಟ್ಟವು ಬಹು ಎತ್ತರಕ್ಕೆ ಏರಿರುವುದೆನ್ನುವುದರಲ್ಲಿ ಸಂದೇಹವಿಲ್ಲ.

ಕರ್ಣಾಟಕ ಸಂಘದಲ್ಲಿ ಈಗ ಹನ್ನೆರಡು ವರ್ಷಗಳ ಕೆಳಗೆ ಬಿತ್ತಿದ ಬೀಜವು ಇಂದಿಗೆ ಫಲ ಕೊಟ್ಟಿತು—ಅತ್ಯುತ್ತಮವಾದ ಫಲವನ್ನೇ ಕೊಟ್ಟಿತು. ಉಪಾಧ್ಯಾಯನಿಗೂ ಉಪನ್ಯಾಸಕನಿಗೂ ಇದಕ್ಕಿಂತ ಹೆಚ್ಚಿನ ಫಲವಿನ್ನೇನು ಉಂಟು? ಇದು ಯಾರಿಗಾದರೂ ಹೆಮ್ಮೆಯ ವಿಷಯ; ಹೆಮ್ಮೆಯು ಮಾತಿರಲಿ; ಇದು ಹಲವು ಕನ್ನಡಿಗರ—ಅದರಲ್ಲಿಯೂ ಮೈಸೂರು ದೇಶದ ಕನ್ನಡಿಗರ—ಸೌಭಾಗ್ಯ. ಇಂಥ ಸಾರಸ್ವತ ಸೌಭಾಗ್ಯಕ್ಕೆ ಕಾರಣವಾದ ಮ|| ಪುಟ್ಟಪ್ಪನವರ ಕಲೆಯು ಹೀಗೆಯೇ ಬೆಳೆಯುತ್ತ ಕಳೆಯೇರುತ್ತ ಬರಲೆಂದೂ ಅವರು ತಮ್ಮ ಇಂಥ ಹಲವು ಕೃತಿ ರತ್ನಗಳಿಂದ ಕನ್ನಡದ ಸಾಹಿತ್ಯ ಸಂಪತ್ತನ್ನು ಇನ್ನೂ ಹೆಚ್ಚಿಸಲಿ ಎಂದೂ ಹಾರೈಸುತ್ತೇನೆ.

ಬೆಂಗಳೂರು
೧-೮-೧೯೩೨

ಎ. ಆರ್. ಕೃಷ್ಣಶಾಸ್ತ್ರೀ

# ಪಾತ್ರಗಳು

---

| | | |
|---|---|---|
| ಬಸವಯ್ಯ | .... | ಬಿದನೂರಿನ ರಾಜಕುಮಾರ |
| ಲಿಂಗಣ್ಣ | .... | ಮಂತ್ರಿ |
| ನಿಂಬಯ್ಯ | .... | ಸೇನಾಪತಿ |
| ಹೊನ್ನಯ್ಯ | .... | ಬಸವಯ್ಯನ ಮಿತ್ರ |
| ಸೋಮಯ್ಯ | .... | ನಿಂಬಯ್ಯನ ಪುತ್ರ |
| ಶಿವಯ್ಯ | .... | ಸೋಮಯ್ಯನ ಮಿತ್ರ |
| ರುದ್ರಯ್ಯ | .... | ಉಪಸೇನಾಪತಿ |
| ಹೈದರಾಲಿ | .... | ಶ್ರೀರಂಗಪಟ್ಟಣದ ಸರ್ವಾಧಿಕಾರಿ |
| ಮಹಮ್ಮದಾಲಿ | .... | ಅವನ ಸೇನಾಪತಿ |
| ಸಂನ್ಯಾಸಿ | .... | ಹೈದರನ ಕಡೆಯವನು |
| ಬ್ರಹ್ಮಚಾರಿ | .... | ಅವನ ಸಹಾಯಕ |
| ತಿಮ್ಮಶೆಟ್ಟಿ | .... | ಬಿದನೂರಿನ ನಿವಾಸಿ |
| ಕೆಂಚಣ್ಣ | .... | ಅರಮನೆಯ ಕಾವಲುಗಾರ |
| ಸಿಂಗಣ್ಣ | .... | ಸೆರೆಮನೆಯ ಕಾವಲುಗಾರ |
| ಚೆಲುವಾಂಬೆ | .... | ಬಿದನೂರಿನ ರಾಣಿ |
| ರುದ್ರಾಂಬೆ | .... | ಮಂತ್ರಿಯ ಪುತ್ರಿ |

ಭೃತ್ಯ, ಪುರಜನರು, ಸೈನಿಕರು, ಭೂತ, ಇತ್ಯಾದಿ.

# ರಕ್ತಾಕ್ಷಿ

## ಅಂಕ ಒಂದು

### ದೃಶ್ಯ ೧

[ಅರಮನೆಯ ಹೆಬ್ಬಾಗಿಲ ಬಳಿ ಕೆಂಚಣ್ಣನು ಕಾವಲು ತಿರುಗುತ್ತಿದ್ದಾನೆ. ರಾತ್ರಿಯ ಬೆಳ್ದಿಂಗಳು ಹಾಲು ಚೆಲ್ಲಿದಂತಿದೆ. ಕೆಂಚಣ್ಣನು ಭಯಗೊಂಡವನಂತೆ, ಅತ್ತ ಇತ್ತ ಯಾರನ್ನೋ ನೋಡುವವನಂತೆ ಚರಿಸುತ್ತಿದ್ದಾನೆ.]

ಕೆಂಚಣ್ಣ—ಏನು ಸದ್ದು ! ಅವರೇಕೆ ಇನ್ನೂ ಬರಲಿಲ್ಲವೋ ನಾನು ಬೇರೆ ಕಾಣೆ. ಎಲ್ಲ ವೇದಾಂತಿಗಳು ! ನಾನು ಹೇಳಿದರೆ ನಂಬುವುದಿಲ್ಲ; ಬಂದುನೋಡಿ ಎಂದರೆ ಬರುವುದಿಲ್ಲ. (ಬೆಚ್ಚಿನೋಡಿ) ಅದೇನದು ? (ನಡುಗುವನು.) ಇವತ್ತು ನಾನೇನೋ ಉಳಿಯುವುದಿಲ್ಲ! ಅಯ್ಯೋ ದೇವರೇ, ತಿಂಗಳು ಬೆಳಕಿನಲ್ಲಿ ಹೇಗೆ ಬೆಳ್ಳಗೆ ಕಾಣುತ್ತಿದೆ ! ನಿನ್ನೆಯ ರೂಪವಲ್ಲ ?—ಅಯ್ಯೋ ಆ ಸಂನ್ಯಾಸಿಯ ಹತ್ತಿರ ಹೋಗಿ ವಿಭೂತಿ ತರುವುದನ್ನೂ ಮರೆತುಬಿಟ್ಟೆನಲ್ಲಾ ! ಶಿವನೇ, ಇವತ್ತು ಹೇಗಾದರೂ ಕಾಪಾಡು ! ನಾಳೆ ವಿಭೂತಿ ತರುತ್ತೇನೆ; ತಂದೇತರುತ್ತೇನೆ !—ಅಯ್ಯೋ ಇದೇನು, ಸಟ್ಟಗೆ ನನ್ನ ಕಡೆಗೇ ಬರುತ್ತಿದೆ ! (ಕೈಮುಗಿದುಕೊಂಡು) ಸ್ವಾಮಿ, ಭೂತರಾಯ, ನನ್ನ ತಪ್ಪು ಏನಿದ್ದರೂ ಕ್ಷಮಿಸಿಬಿಡು. ನಿನಗೆ ಏನು ಬೇಕಾದರೂ ಕಾಣಿಕೆ ಕೊಡುತ್ತೇನೆ. (ಕಣ್ಮುಚ್ಚಿ ಮೊಳಕಾಲೂರುವನು.)

[ಹೊನ್ನಯ್ಯ ಪ್ರವೇಶಿಸಿ ನಸುನಕ್ಕು ಮಾತಾಡುತ್ತಾನೆ. ಆತನು ತರುಣ.]

ಹೊನ್ನಯ್ಯ—ಇದೇನೊ ಇದು, ಕೆಂಚಣ್ಣ ?

ಕೆಂಚಣ್ಣ (ಕಣ್ದೆರೆದು)—ಅಯ್ಯೋ ನೀವೇನು ? (ಎದ್ದು ನಿಂತು) ನಾನು ಅದೇ ಬಂತೆಂದು ಸತ್ತೇಹೋಗಿದ್ದೆ.

ಹೊನ್ನಯ್ಯ—ಅಯ್ಯೋ ಮಂಕೂ, ನೀನು ನಿನ್ನೆ ಕಂಡಿದ್ದೂ ನನ್ನಂಥ ಭೂತವೆಂದೇ ತೋರುತ್ತದೆ.—ಸರಿಯಾಗಿ ವಿಮರ್ಶೆಮಾಡುವುದಿಲ್ಲ ಏನೂ ಇಲ್ಲ. ಸುಮ್ಮ ಸುಮ್ಮನೆ ಹೆದರಿಕೊಂಡು ಸಾಯುವುದು ! ಥೂ ! ನಿನ್ನ ಗಂಡಸುತನಕ್ಕೆ ಬೆಂಕಿಹಾಕಲಿ !

**ಕೆಂಚಣ್ಣ**—ಹೊನ್ನಯ್ಯಾ, ನೀವು ಸರಿಯಾಗಿ ನೋಡದೆ ಹೀಗೆಲ್ಲ ಹೇಳುವುದು ಚೆನ್ನಾಗಿಲ್ಲ. ನನಗೇನು ಕುರುಡೇ ? ಮಂಕೇ ? ನಿನ್ನೆ ಸರಿಯಾಗಿ ನೋಡಿದ್ದೇನೆ.

**ಹೊನ್ನಯ್ಯ**—ನೋಡಿದ ಕೂಡಲೆ ಕಣ್ಣು ಮುಚ್ಚಿದೆಯಷ್ಟೇ ?

**ಕೆಂಚಣ್ಣ**—ಇವತ್ತು ಕಣ್ಣು ಮುಚ್ಚಿದೆ ಎಂದರೆ ನಿನ್ನೆಯೂ ಕಣ್ಣು ಮುಚ್ಚಲು ನಾನೇನು ಹೆಂಗಸೆ ?

**ಹೊನ್ನಯ್ಯ**—ನಿಮ್ಮಂತಹ ಗಂಡಸರಿಗಿಂತಲೂ ಎಷ್ಟೋ ಜನ ಹೆಂಗಸರೇ ಲೇಸಯ್ಯ.

**ಕೆಂಚಣ್ಣ**—ಸುಮ್ಮನೆ ನೀವೇ ಉಪನ್ಯಾಸ ಮಾಡಿದರೆ? ನಾನು ಹೇಳುವುದನ್ನೂ ಸ್ವಲ್ಪ ಕಿವಿಗೆ ಹಾಕಿಕೊಳ್ಳಿ. ನಿನ್ನೆ, ನೋಡಿ, ಓ ಆ ದಿಕ್ಕಿನಿಂದ ಬಂತು. ನಾನು ಯಾರೋ ಮನುಷ್ಯರೆಂದೇ ಭಾವಿಸಿ ಪದ್ಧತಿಯಂತೆ ''ಯಾರಲ್ಲಿ ?'' ಎಂದು ಕರೆದೆ. ಮಾತಾಡಲಿಲ್ಲ. ಮತ್ತೆ ಕರೆದೆ. ಮಾತಾಡದೆ ಸರ ಸರ ಸರ ಬಂದೇ ಬಂತು. ಏನು ಸ್ವಾಮಿ! ಬೆಳ್ದಿಂಗಳಲ್ಲಿ ಎತ್ತರವಾಗಿತ್ತು; ಬೆಳ್ಳಗಿತ್ತು! ಮತ್ತೆ ಯಾರೋ ದೊಡ್ಡಮನುಷ್ಯರಿರಬೇಕೆಂದು ಯೋಚಿಸಿ "ಯಾರು ಸ್ವಾಮಿ ಅದು ?'' ಎಂದು ಕೂಗಿದೆ. ಒಂದುಸಾರಿ ನನ್ನ ಕಡೆ ಕಣ್ಣು ಹೊರಳಿಸಿ ನೋಡಿತು. ನನಗೆ ಎಲ್ಲ ಬರುವ ಹಾಗಾಯಿತು. ಆದರೂ ನನಗೆ ಭೂತ ಎಂದು ಗೊತ್ತಾಗಲೇ ಇಲ್ಲ. ಕಡೆಗೆ ನೋಡುತ್ತೇನೆ, ಏನು ನೋಡುವುದು! ಸಾಕ್ಷಾತ್ ನಮ್ಮ ತೀರಿಕೊಂಡ ಮಹಾರಾಜರು! ನನ್ನ ಮೈಮೇಲೆ ತಕಪಕ ತಕಪಕ ಕುದಿಯುವ ಬಿಸಿನೀರು ಚೆಲ್ಲಿದಂತಾಯ್ತು. ಕಣ್ಣು ಕತ್ತಲೆಗಟ್ಟಿ ಕೊಂಡು ಬಂತು. ಹಾಗೆ ಕೈಕಾಲು ಕಡಿದುಕೊಂಡು ಬಿದ್ದುಬಿಟ್ಟೆ !

**ಹೊನ್ನಯ್ಯ**—ಕೆಂಚಣ್ಣ, ನಿನಗೆ ಕಳ್ಳುಗಿಳ್ಳು ಕುಡಿಯುವ ಅಭ್ಯಾಸವಿಲ್ಲವೇನು? ನಿಜವಾಗಿ ಹೇಳು.

**ಕೆಂಚಣ್ಣ** (ಹೊನ್ನಯ್ಯನನ್ನು ದುರುದುರು ನೋಡಿ)—ಏನು ಸ್ವಾಮಿ! ನೀವೇನೋ ದೊಡ್ಡಮನುಷ್ಯರು. ಆದರೆ ಈ ಮಾತು ಹೇಳುವುದು ಮರ್ಯಾದೆಯಲ್ಲ. ಕಳ್ಳು ಕುಡಿಯುವುದು ಬಿಟ್ಟು ಎಷ್ಟೋ ಜನ ಆಪ್ತ ಸ್ನೇಹಿತರನ್ನೇ ಕಳೆದು ಕೊಂಡಿದ್ದೇನೆ !

**ಹೊನ್ನಯ್ಯ**—ಹೋಗಲಿಬಿಡು ; ಇವತ್ತೇನಾದರೂ ಬಂತೇನು ಹೇಳು ?

**ಕೆಂಚಣ್ಣ**—ಇಲ್ಲ ; ಇನ್ನೂ ಬರಲಿಲ್ಲ.

**ಹೊನ್ನಯ್ಯ**—ಅದೇನು ನಾನು ಬರುತ್ತೇನೆಂದು ಬರಲಿಲ್ಲವೆ ?

**ಕೆಂಚಣ್ಣ** (ಮುನಿಸಿನಿಂದ)—ಏನೋ ಸ್ವಾಮಿ ! ಇರಬಹುದು !

**ಹೊನ್ನಯ್ಯ**—ಮುನಿದುಕೊಳ್ಳಬೇಡ, ಕೆಂಚಣ್ಣ. ಒಂದೊಂದು ಸಾರಿ ನಮ್ಮ ಭಯ, ನಮ್ಮ ಭ್ರಾಂತಿ ಇವುಗಳಿಂದ ಹೀಗೆಲ್ಲ ಅದ್ಭುತರೂಪಗಳು ಕಾಣುವುದುಂಟು. . .

ಕೆಂಚಣ್ಣ—ಅಯ್ಯೋ, ಅದು ಕಾಣಿಸಿಕೊಳ್ಳುವುದಕ್ಕೆ ಮೊದಲು ನನಗೆ ನೀವು ಹೇಳಿದ್ದು ಯಾವುದೂ ಇರಲಿಲ್ಲ ಎಂದು ಆಣೆ ಇಟ್ಟುಬೇಕಾದರೂ ಹೇಳುತ್ತೇನೆ.

ಹೊನ್ನಯ್ಯ—ನಿನಗೆ ಮಾತ್ರವೇ ಅಲ್ಲ. ಎಂಥೆಂಥವರಿಗೂ ಕಾಣುವುದುಂಟು. ವೇದಾಂತ ಓದಿದರೆ ನಿನಗೂ ತಿಳಿಯುವುದು ಇದೆಲ್ಲ.

ಕೆಂಚಣ್ಣ—ಏನೋ ಸ್ವಾಮಿ, ನಿಮ್ಮ ವೇದಾಂತದ ಕಣ್ಣಿಗೆ ಸುಣ್ಣಿಚಿಕೊಂಡು ಇನ್ನೆಷ್ಟು ವೇದಾಂತಗಳಿವೆಯೋ ನಾನೇನು ಒಲ್ಲೆ! ಅಂತೂ ನೀವೇನು ಬೇಕಾದರೂ ಹೇಳಿ, ನಾನೇನೊ ಕಂಡಿದ್ದು ನಿಜ. ಇವತ್ತು ಇಲ್ಲಿ ನಿಮ್ಮನ್ನು ನೋಡುತ್ತಿರುವುದು ಭ್ರಾಂತಿಯಾಗಿರುವ ಪಕ್ಷದಲ್ಲಿ ನಿನ್ನೆ ಅದನ್ನು ಕಂಡಿದ್ದೂ ಭ್ರಾಂತಿಯೇ ಇರಬಹುದು.

ಹೊನ್ನಯ್ಯ—ಹಾಗಾದರಿವತ್ತೆಲ್ಲಿ ನಿನ್ನ ಭೂತ?

ಕೆಂಚಣ್ಣ—ಸ್ವಲ್ಪ ತಾಳಿ, ಸ್ವಾಮಿ. ಕಾದು ನೋಡೋಣ. ಇನ್ನೇನು ಬರುವ ಹೊತ್ತಾಯಿತೆಂದು ತೋರುತ್ತದೆ. ನಿನ್ನೆಯೂ ಅದು ಕಾಣಿಸಿಕೊಂಡಾಗ, ನೋಡಿ, ಓ ಆ ನಕ್ಷತ್ರ ಅಲ್ಲಿಯೇ ಇತ್ತು. ಇನ್ನೇನು ಬೆಳಗಾಗುವ ಹೊತ್ತೆಂದು ನಾನು . . . ಅಲ್ಲಿ ನೋಡಿ! ಅಲ್ಲಿ ನೋಡಿ! ಅದೇ ಬರುತ್ತಿದೆ! ಅದೇ! ಅದೇ!

ಹೊನ್ನಯ್ಯ (ಚೆನ್ನಾಗಿ ಈಕ್ಷಿಸಿ)—ಕೆಂಚಣ್ಣ, ಶಿವಮಂತ್ರ ಜಪಿಸು. ಶಿವ! ಶಿವ!

ಕೆಂಚಣ್ಣ—ಶಿವ! ಶಿವ! ಶಿವ! ಶಿವ! ಶಿವ! . . .

ಹೊನ್ನಯ್ಯ—ಇತ್ತಕಡೆಗೇ ಬರುತ್ತಿದೆ!

ಕೆಂಚಣ್ಣ—ಹೌದು ಸ್ವಾಮಿ, ನಿನ್ನೆಯೂ ಹೀಗೆಯೆ ಮಾಡಿತ್ತು. ಶಿವ! ಶಿವ! ಶಿವ! . . .

ಹೊನ್ನಯ್ಯ—ಏನು ಭಯಂಕರವಾಗಿದೆ!—ಹೌದು, ಶಿವೈಕ್ಯರಾದ ನಮ್ಮ ದೊರೆ ಬಸಪ್ಪನಾಯಕರಂತೆಯೇ ಇದೆ. ನನಗೂ ಕೂಡ—

ಕೆಂಚಣ್ಣ—ನೋಡಿ, ಹತ್ತಿರ ಬಂದು! ಮಾತಾಡಿಸಿ, ಸ್ವಾಮಿ, ಮಾತಾಡಿಸಿ! ಶಿವ! ಶಿವ! ಶಿವ! ಶಿವ! . . .

[ಭೂತ ದೂರದಲ್ಲಿ ಪ್ರವೇಶಿಸುತ್ತದೆ.]

ಹೊನ್ನಯ್ಯ—ಓ ನಿಶಾ ಸಂಚಾರಿ,
ನೀನಾರೆ ಆಗಲಿ, ನನ್ನೊಡನೆ ಮಾತಾಡು.
ತೀರಿಹೋಗಿಹ ನಮ್ಮ ದೊರೆ ಬಸವನಾಯಕರ
ವೇಷವನು ತಳೆದಿಂತು ನಿರ್ಜನ ರಜನಿಯಲ್ಲಿ
ಅನಾಥ ಪ್ರೇತದ ತೆರದಿ ಸಂಚರಿಸುತಿಹೆಯೇಕೆ?

ಬಯಕೆ ಏನಿದ್ದರೂ ಹೇಳು. ನಡೆಯಿಸುವೆ.
ಓ ನಿಂತು ಮಾತಾಡು.

**ಕೆಂಚಣ್ಣ**— ಕೋಪಗೊಂಡಂತಿದೆ!
ಶಿವ! ಶಿವ! . . .

**ಹೊನ್ನಯ್ಯ**—ಹೋಗದಿರು, ಹೋಗದಿರು, ನಿಲ್ಲು, ಮಾತಾಡು.
ನಿನ್ನಾಸೆಯೇನುಸುರು. ಬಿದನೂರಿಗೇಂ ಕೇಡು
ಸೂಚಿಸುತ ಇಂತು ನೀ ತೋಳಲುತಿಹೆ? ಶಿವನಾಣೆ!
ನಿನಗೆ ನುಡಿಯುವ ಬಲ್ಮೆ ಇರುವುದಾದರೆ, ನುಡಿ!
ಶಿವನಾಣೆ! ನಿಲ್ಲು! ನಿಂತು ಮಾತಾಡು!

[ಭೂತ ಮಾಯವಾಗುತ್ತದೆ.]

**ಕೆಂಚಣ್ಣ** (ಶಿವ ಶಿವ ಎಂದು ನಿಲ್ಲಿಸಿ ನಿಡುಸುಯ್ದು)—ಹೊನ್ನಯ್ಯ, ದೊರೆಗಳಿಗೆ ನೀವು ಹೀಗೆ ಹೇಳುವುದು ಅಪರಾಧ. ಭೂತವಾದರೆ ಏನಂತೆ? ನಮ್ಮ ದೊರೆಯಲ್ಲವೆ? ಅದೇನು ರೂಪ! ಅದೇನು ಗಾಂಭೀರ್ಯ!

**ಹೊನ್ನಯ್ಯ** (ಮೂಕನಾಗಿ ಭೂತವು ಹೋದ ಮಾರ್ಗವನ್ನೇ ನೋಡುತ್ತ ನಿಂತು)—ಅಂತೂ ಹೋಗಿಯೆ ಬಿಟ್ಟಿತು! ಮಾತು ಕೂಡ ಆಡಲಿಲ್ಲ. ಇದೇನೋ ಅದ್ಭುತವಾಗಿದೆಯಪ್ಪಾ! ನಮ್ಮ ನಾಡಿಗೆ ಏನು ಕೇಡುಗಾಲ ಬಂದಿದೆಯೊ ನಾನರಿಯೆ!

**ಕೆಂಚಣ್ಣ**—ನಾನು ಹೇಳಿದರೆ ಸುಳ್ಳು, ಭ್ರಾಂತಿ, ಮಂಕು, ಹುಚ್ಚು, ಕಳ್ಳು! ಈಗ ನೀವೇ ಕಣ್ಣಾರೆ ಕಂಡಿರಲ್ಲ. ಈಗ ಹೇಳಿ; ಇದೇನು ಸಟೆಯೋ ದಿಟವೋ?

**ಹೊನ್ನಯ್ಯ**—ಕಾಣದೆಯೆ ಸುಳ್ಳೆಂದು ಹಳಿಯುವರು ನಾವೆಂಥ
ತಿಳಿಗೇಡಿಗಳು! ಇದನು ಸಟೆಯೆಂಬುವನೆ ಮಂಕು.
ಅರ್ಥಗರ್ಭಿತವಾಗಿ ತೋರುತಿದೆ. ಇದರಲ್ಲಿ
ಗೂಢಾರ್ಥವಿರಬೇಕು. ಸತ್ಪುರುಷನಾದ ದೊರೆ
ಸತ್ತಿಂತು ದೆವ್ವವಾಗುವುದೆಂದರೇನು?
ಸತ್ಕ್ರಿಯೆಗಳೆಲ್ಲವನು ಮಗನೆ ಮಾಡಿರುವನು.
ಜಂಗಮರನೇಕರಿಗೆ ದಾನ ದಕ್ಷಿಣೆಯಾಗಿದೆ.—
ಆದರೂ ಇದರೊಳೇನೊ ಪ್ರಮಾದ ನಡೆದಿಹುದು.
ಕೆಂಚಣ್ಣ, ನೀನು ಇದನಾರಿಗೂ ಹೇಳದಿರು.
ನಾಳೆ ನಮ್ಮರಸುಕುವರ ಬಸವಯ್ಯನನೆ
ಕರೆತರುವೆ. ನಮ್ಮೊಡನೆ ನುಡಿಯದೀ ಭೂತವು,
ದೊರೆ ಬಸವನಾಯಕರೆ ದಿಟವಾದ ಪಕ್ಷದಲಿ

ತಮ್ಮಣುಗ ಬಸವಯ್ಯನೊಡನೆ ನುಡಿಯದಿರದು.—
ನೋಡದೋ, ನೇಸರಾಗಲೆ ಮೂಡುವೆಟ್ಟಿನಲಿ
ಕೆಂಪು ಮುಂಬೆಳಕನೆರಚುತ್ತಿಹನು. ಬಾ, ಇದನು
ಯಾರೊಡನೆಯೂ ಹೇಳದಿರು! ಗೊತ್ತಾಯಿತೆ?

ಕೆಂಚಣ್ಣ—ಅಪ್ಪಣೆ, ಸ್ವಾಮಿ. (ಹೋಗುವರು.)

(ಪರದೆ ಬೀಳುವುದು.)

## ದೃಶ್ಯ ೨

[ಅರಮನೆಯ ಒಂದು ಭಾಗ. ಬಸವಯ್ಯನು ಚಿಂತಾಮಗ್ನನಾಗಿ ಶತಪಥ ತಿರುಗುತ್ತಿದ್ದಾನೆ. ಆತನು ತರುಣ. ಸುಂದರನಾದರೂ ಗಾಂಭೀರ್ಯ ಎದ್ದು ಕಾಣುತ್ತದೆ. ಎತ್ತರವಾಗಿ ನಸುತೆಳ್ಳಗಿದ್ದಾನೆ.]

ಬಸವಯ್ಯ— ಎಷ್ಟು ತೊಡಕಾದುದೀ ಬುವಿಯ ಬಾಳು!
ಇಂತಹ ತಾರುಣ್ಯದಲ್ಲಿಯೇ ಕಷ್ಟದಶೆ.
ಬಾಳೆಂಬುದೇ ಹಾಳು. ಹುಟ್ಟದಿರುವುದೆ ಲೇಸು.
ಹುಟ್ಟಿದರೆ ಹಾಳು ಕರ್ಮದ ಬುತ್ತಿ ನಮ್ಮ
ಹಿಂದುಗಡೆ ಬಂದೆ ಬರುವುದು ನೆಳಲಿನಂತೆ!—
ನಾನೊ
ಸ್ವಪ್ನಮುದ್ರಿತ ಜೀವಿ! ಅದನರಿತೆ ಎಲ್ಲರೂ
ನನ್ನನುಪೇಕ್ಷಿಸುತೆ ನಡೆದಪರು. ಓ ತಂದೆ,
ನನ್ನೊಬ್ಬನನೆ ಬಿಟ್ಟು ಹೋದಿರೆಲ್ಲಿಗೆ ನೀವು?
ನಿಮ್ಮನುಳಿದೆನಗಿಂದು ಲೋಕವೆ ಬೆಂಡಾಗಿ
ಹೋಗಿಹುದು. ಏನೊಂದೂ ಬೇಡವಾಗಿದೆ ನನಗೆ.
ನನ್ನ ಮಲತಾಯಿ, ಆ ರಾಕ್ಷಸಿ, ಆ ಶನಿ
ಸೇನಾಧಿಪತಿಯೊಡನೆ ಸರಸಕಾರಂಭಿಸಿಹಳು!
ಓ ಪಿತನೆ, ವಂಶಕೆ ಕಳಂಕವನು ತರುತಿಹಳು!
ಬೇಡವೆಂದರೂ ಕೇಳದೆಯೆ ಆ ರಾಕ್ಷಸಿ
ಚೆಲುವಾಂಬೆಯನ್ನೇಕೆ ಮದುವೆಯಾದಿರಿ ಮರಳಿ?
ನೀವು ತೀರಿಕೊಂಡಿನ್ನೂ ವಾರಗಳು ಕೂಡ
ಕಳೆದಿಲ್ಲ. ನಿಮ್ಮ ಮಸಣದ ಮೇಲೆ ಹೊಸಹಸುರು

ಕೂಡ ಹಬ್ಬಲಾರದಿದೆ; ಅತ್ತವರ ಕೆನ್ನೆಯಲಿ
ಕಣ್ಣೀರು ಬತ್ತಿಲ್ಲ. ಆಗಲೇ ಚಕ್ಕಂದ-
ದಿಂದಿಹಳು ಆ ದುರುಳ ನಿಂಬಯ್ಯನೊಡಗೂಡಿ.
ಓ ಚಂಚಲತೆ, ನಿನ್ನ ಹೆಸರೇ ಸ್ತ್ರೀಯಲ್ತೆ ?
ಹೇ ಜಗದೀಶ್ವರಾ,
ನಿನಗೆ ಕಣ್ಣಿಲ್ಲವೇ ? ನಿನಗೆ ದಯೆಯಿಲ್ಲವೇ ?
ನೀನು ಧರ್ಮದ ಮೂರ್ತಿ ಎನಿಸಿಕೊಂಡಿಹೆಯೇಕೆ ?
ಅಥವಾ ನೀನಿರುವೆಯೋ ಇಲ್ಲವೋ ? ಓ ವಿಧಿ,
ನೀನಿರೆ ಅಧರ್ಮವಿಂತೇಕೆ ಚಲ್ಲಾಟದಲಿ
ಮುಳುಗಿಹುದು ? ಪಾಪವರಿಯದ ಗಿರಿಯ ಶಿಖರಗಳ
ಮೇಲೆ ಎರಗುವ ಸಿಡಿಲೇ, ಬಡಿಯಬಾರದೆ ಬಂದು
ಪಾಪಿಗಳ ಪಾಳೆದೆಗೆ ! ಯಾರಿಗೊರೆಯಲಿ ಇದನು ?
ಯಾರೊಬ್ಬರೂ ನನ್ನ ಮಾತುಗಳ ನಂಬರು !
ಲಿಂಗಣ್ಣ ಮಂತ್ರಿಗಳು ಕೂಡ ಆ ಮಾರಿಯಲಿ
ಮೋಸವನು ಕಾಣಲಾರದೆ ಇರುವರಿನ್ನೂ ! (ಚಿಂತಿಸುವನು.)

[ಲಿಂಗಣ್ಣ ಮಂತ್ರಿ ಮೆಲ್ಲಗೆ ಗಾಂಭೀರ್ಯದಿಂದ ಪ್ರವೇಶಿಸುವನು. ಆತನು ಮುದುಕ. ಆದರೂ ಮುಖದಲ್ಲಿ ಕಾರ್ಯದಕ್ಷತೆಯ ಕಳೆ ಇದೆ. ಅಂಗಾಂಗಗಳು ಶೀರ್ಣವಾಗಿದ್ದರೂ ಅವುಗಳಲ್ಲಿ ಚಿತ್ತದಾರ್ಢ್ಯದ ವಜ್ರಬಲವಿರುವಂತೆ ತೋರುತ್ತದೆ.]

ಲಿಂಗಣ್ಣ—ರಾಜಕುಮಾರ !
ಬಸವಯ್ಯ (ತಿರುಗಿನೋಡಿ)—ಬನ್ನಿ, ಲಿಂಗಣ್ಣ ಮಂತ್ರಿಗಳೇ, ಕುಳಿತುಕೊಳ್ಳಿ.
ಲಿಂಗಣ್ಣ—ನೀನಿನ್ನೂ ಚಿಂತೆಯನು ಬಿಟ್ಟಿಲ್ಲ.
ಬಸವಯ್ಯ—ಹೇಗೆ ಬಿಡಲಿ, ಮಂತ್ರಿಗಳೆ ? ಬೆಂಕಿಯಾರಿದ ಹೊರತೂ ಬಿಸಿ ಹೋಗುವುದೆ ? ನಿಂತಿರುವಿರೇಕೆ ? ಕುಳಿತುಕೊಳ್ಳಿ. (ಇಬ್ಬರೂ ಕುಳಿತುಕೊಳ್ಳುತ್ತಾರೆ.)
ಲಿಂಗಣ್ಣ—ನನಗಿನ್ನೂ ನಿನ್ನ ಚಿಂತೆಯ ಅರ್ಥ ಹೊಳೆದಿಲ್ಲ.
ಬಸವಯ್ಯ—ಹೇಳಿದರೂ ನಂಬದಿದ್ದರೆ ಹೊಳೆಯುವುದು ಹೇಗೆ ?
ಲಿಂಗಣ್ಣ—ನಿನ್ನದು ಆಧಾರವಿಲ್ಲದ ಸಂಶಯ, ಬಸವಯ್ಯ.
ಬಸವಯ್ಯ—ಮಂತ್ರಿಗಳೆ, ನೀವೇನೊ ನನಗೆ ಪೂಜ್ಯರು ; ನಮ್ಮ ತಂದೆಗೆ ಆಪ್ತರಾಗಿದ್ದವರು ; ಆದರೆ ಈ ವಿಷಯದಲ್ಲಿ ನನ್ನ ತಿಳಿವೇ ದಿಟವೆಂದು ತೋರುತ್ತದೆ.
ಲಿಂಗಣ್ಣ—ಆಧಾರವಿಲ್ಲದೇ ಸಿದ್ಧಾಂತಮಾಡಬಾರದು, ಮಗೂ.

ಬಸವಯ್ಯ (ಸ್ವಲ್ಪ ರಭಸದಿಂದ)—ಇನ್ನೇನು ಆಧಾರ ಬೇಕು ನಿಮಗೆ? ತಾಯಿ— ಅಯ್ಯೋ ಎಷ್ಟು ಕರ್ಕಶವಾಗಿದೆ ಆ ಕೋಮಲ ಶಬ್ದ!—ನನ್ನ ಮಲತಾಯಿ, ಚೆಲುವಾಂಬೆ, ಆ ಸೇನಾಧಿಪತಿ ಸಿಂಬಯ್ಯನೊಡನೆ ಹಗಲೂ ಇರುಳೂ ನಲಿಯುತ್ತಿರುವಳು. ಅದಕ್ಕಿಂತಲೂ ಇನ್ನೇನು ಬೇಕು ಆಧಾರ ನಿಮಗೆ?

ಲಿಂಗಣ್ಣ—ಕ್ಷಮಿಸು, ರಾಜಕುಮಾರ, ನಿನಗಿನ್ನೂ ಅನುಭವ ಸಾಲದು. ಆ ಅಪರಾಧ ವನು ನನ್ನ ಮೇಲೆಯೂ ಹೊರಿಸಬಹುದಷ್ಟೆ? ನಾನೂ ರಾಣಿ ಚೆಲುವಾಂಬೆ ಯೆಡೆಗೆ ಎಷ್ಟೋ ಸಾರಿ ಮಂತ್ರಾಲೋಚನೆಗೆ ಹೋಗುತ್ತಿದ್ದೇನೆ.

ಬಸವಯ್ಯ—ಬಿಡಿ, ಬಿಡಿ, ಮಂತ್ರಿಗಳೆ. ಏನು ಮಾತು ನೀವು ಹೇಳುವುದು? ನಿಮ್ಮ ನಿರ್ಮಲ ಹೃದಯಕ್ಕೆ ಕಾಪಟ್ಯ ಪರಿಚಯ ಬಹುದೂರ! ಸುದ್ದಿ ಜನಜನಿತ ವಾಗಿ ಹಬ್ಬುತ್ತಿದೆ.

ಲಿಂಗಣ್ಣ—ಜನರ ಮಾತು ನಂಬಿದರೆ ಉಳಿವುಂಟೆ, ರಾಜಕುಮಾರ? ನಿನ್ನ ಸಂಶಯ ವನು ಕಿತ್ತುಬಿಸುಡು. ರಾಜರಳಿದ ಕಾಲ. ಪರರಾಜರು ಹೊಂಚುನೋಡುವ ಸಮಯ. ರಾಣಿಯೊಡನೆ ಎಷ್ಟೋ ರಹಸ್ಯಗಳನ್ನು ಹೇಳುವ ಪ್ರಸಂಗ ಒದಗು ವುದು ಸೇನಾಪತಿಗೆ ಸಹಜವಲ್ಲವೆ? ನಿನ್ನ ಪಟ್ಟಾಭಿಷೇಕವಾಗುವವರೆಗೆ ಚೆಲು ವಾಂಬೆಯೊಡನೆ ರಾಜಕಾರ್ಯ. ಆಮೇಲೆ ನಿನ್ನೆಡೆಗೇ ಬರುತ್ತಾನೆ. ತೆಗೆ ತೆಗೆ, ದೊಡ್ಡವರಿಗೆ ಸಣ್ಣ ಮನಸ್ಸಿರಬಾರದು. ಇದೆಲ್ಲಿಯಾದರೂ ಅವರಿಗೆ ತಿಳಿದರೆ ಏನೆಂದಾರು!

ಬಸವಯ್ಯ—ನಾನು ಇನ್ನಾರೊಡನೆಯೂ ಹೇಳಿಲ್ಲ, ಮಂತ್ರಿಗಳೆ. ನನ್ನ ನಾನೆ ತಿಂದುಕೊಳ್ಳುತ್ತಿದ್ದೇನೆ.—ನಿನ್ನೆ ರಾತ್ರಿ ನನಗೊಂದು ಕನಸುಬಿತ್ತು.

ಲಿಂಗಣ್ಣ—ಏನು ಕನಸು?

ಬಸವಯ್ಯ— ಕನಸಿನಲಿ ನಮ್ಮಯ್ಯ ತೋರಿದನು. ಮಂತ್ರಿಗಳೆ,
ನಾನಾ ಮುಖವ ನೋಡಿ ನಿಟ್ಟುಸಿರುಬಿಟ್ಟ.
ತಂದೆಯಳುತಿದ್ದನಯ್ಯೋ ಎಂದು!
ಕಣ್ಣೀರು ಒಳಒಳನೆ ಸುರಿಯುತಿತ್ತು.
ನನ್ನೊಡನೆ ಏನೊಂದು ಮಾತನೂ ಆಡಲಿಲ್ಲ.

ಲಿಂಗಣ್ಣ— ಬಸವಯ್ಯ, ನೀನೂ ಶಾಸ್ತ್ರಜ್ಞ, ತಿಳಿದವನು.
ನಮ್ಮ ಭಯಭ್ರಾಂತಿಗಳೆ ಕನಸಿನಲಿ ಬಹವೆಂದು
ತಿಳಿಯೆಯಾ? ಸ್ವಪ್ನಗಳು ಸುಪ್ತಚಿತ್ತದ ವಾಣಿ.
ಅದಕೆಲ್ಲ ಬಗೆ ಕೊರಗಬಾರದು, ಮಗೂ.—
ನೋಡಲ್ಲಿ ಚೆಲುವಾಂಬೆ—

ಬಸವಯ್ಯ (ನೋಡುತ್ತ)—ನಿಂಬಯ್ಯನೂ !

ಲಿಂಗಣ್ಣ— ನಿಂಬಯ್ಯನೊಬ್ಬನೆಯೆ ? ಸೋಮಯ್ಯನೂ ಇಹನಲ್ತೆ ?—
ಸಂಶಯದ ಕಣ್ಣಿಗೆ ಬಹಳ ಕರುಬು.

[ಚೆಲುವಾಂಬೆ, ನಿಂಬಯ್ಯ, ಸೋಮಯ್ಯ ಬರುವರು. ಚೆಲುವಾಂಬೆ ರೂಪವತಿ. ನಿಂಬಯ್ಯನಲ್ಲಿಯೂ ರೂಪವಿದೆ. ಆದರೆ ಆತನ ಮುಖ ಅಂತರಂಗದ ಅಶುದ್ಧಿಯಿಂದ ಮಲಿನವೂ ಕ್ರೂರವೂ ಆಗಿದೆ. ಸೋಮಯ್ಯ ತರುಣ. ಬಹಳ ಸಾಧಾರಣ ವ್ಯಕ್ತಿ.—ಲಿಂಗಣ್ಣ ಬಸವಯ್ಯ ಎದ್ದು ನಿಲ್ಲುತ್ತಾರೆ. ಆದರೆ ಬಸವಯ್ಯ ಮನಸ್ಸಿಲ್ಲದ ಮನಸ್ಸಿನಿಂದ ಹಾಗೆ ಮಾಡುತ್ತಾನೆ]

ಚೆಲುವಾಂಬೆ—ಮಂತ್ರಿಗಳೆ, ನಮ್ಮ ಕುವರನ ಕೊರಗು ಹೇಗಿಹುದು ?

ಲಿಂಗಣ್ಣ—ದೇವೀ, ತಂದೆಯವರನು ನೆನೆದು ಮರುಗುವುದು ಮಕ್ಕಳಿಗೆ ಸಹಜವಲ್ಲವೆ ?

ಚೆಲುವಾಂಬೆ— ರಾಜಕುಮಾರ,
ನೀನಿಂತು ಮರುಗುತ್ತೆ ಕುಳಿತರೆಮಗೇನು ಗತಿ ?
ನನ್ನನಾದರು ಕಂಡು ಶಾಂತನಾಗಬಾರದೆ ?
ಅವರಳಿವು ನಿನಗಿಂತಲೆನಗೇನು ಕಡಿಮೆಯೇ ?
ಆದರೆದೆನೋವನಿತನೂ ತಡೆದು, ನಿನಗಾಗಿ,
ನಿನ್ನಭ್ಯುದಯಕಾಗಿ, ಬಿದನೂರು ಸಾಮ್ರಾಜ್ಯ
ಶ್ರೇಯಸ್ಸಿಗಾಗಿ ಮಂತ್ರಿ ಸೇನಾಪತಿಗಳೊಡನೆ
ರಾಜಕಾರ್ಯದಲಿ ತೊಡಗಿಹೆನು. ಹೆಂಗಸಹ
ನಾನಿಂತು ಧೈರ್ಯದಿಂದಿರೆ ನೀನು ಮರುಗುವುದು
ತರವಲ್ಲ.

ಬಸವಯ್ಯ (ದುಃಖದಿಂದ)—ತರವಲ್ಲ ! ತರವಲ್ಲ, ಓ ತಾಯಿ !
ಬಲ್ಲೆನದನಾದರೂ ಈ ನನ್ನ ಹೇಡಿಯೆದೆ
ಹಿಂಜರಿಯುತಿಹುದು.

ಚೆಲುವಾಂಬೆ (ಕಣ್ಣೀರು ಮಿಡಿಯುತ್ತ)—ನಿಂಬಯ್ಯ, ನೀವಾದರೂ ಸಂತೈಸಬಾರದೆ ?

ನಿಂಬಯ್ಯ (ಕಣ್ಣೀರು ಮಿಡಿದು)—ದೇವಿ, ಏನು ಹೇಳಲಿ ನಾನು ?
ಎಲ್ಲ ತಿಳಿದವರವರು. ಅಲ್ಲದೆಯೆ ನಾಯಕರ
ನೆನೆದೆನೆಂದರೆ ನನಗೇ ಎದೆಯೊಡೆದು ಹೋಗುವುದು.
ಅಂತಹ ಮಹಾಪುರುಷನನು ಕಳೆದುಕೊಂಡದ್ದು
ನಮ್ಮ ದೌರ್ಭಾಗ್ಯವೇ ಸರಿ. ನಾನೆ ಅಳಲುತಿರೆ
ಇನ್ನಾರ ಸಂತೈಸಲಿ ?

ಲಿಂಗಣ್ಣ— ನಿಂಬಯ್ಯ,

ಸೇನೆಯಧಿಪತಿ ನೀನೆ ಸಂತವಿಪುದನು ಉಳಿದು
ಇಂತು ಗೋಳಾಡಿದರೆ ಅರಸುಕುವರನಿಗಾರು
ಸಂತೈಕೆ ಹೇಳುವವರು ?

ಚೆಲುವಾಂಬೆ— ಮಂತ್ರಿಗಳೆ,
ಅಳುವವರ ಬಳಿ ಅಳಲುತಿರೆ ಹೆಚ್ಚುವುದು ಶೋಕ
ಬನ್ನಿ ನಾವಿಲ್ಲಿಂದೆ ತೆರಳುವಂ.—
ಸೋಮಯ್ಯನಿಲ್ಲಿರಲಿ.—ಸೋಮಯ್ಯ,
ಬಸವಯ್ಯನವರೊಡನೆ ಮಾತುಕತೆಯಾಡುತ್ತೆ
ಅವರ ದುಃಖವ ನೀಗು.

ಸೋಮಯ್ಯ—ಆಜ್ಞೆ !

(ಲಿಂಗಣ್ಣ, ಚೆಲುವಾಂಬೆ, ನಿಂಬಯ್ಯ ಹೋಗುತ್ತಾರೆ.)

ಬಸವಯ್ಯ—ಕುಳಿತುಕೊ, ಸೋಮಯ್ಯ.

ಸೋಮಯ್ಯ—ನೀನೂ ಕುಳಿತುಕೊ. (ಇಬ್ಬರೂ ಕುಳಿತುಕೊಳ್ಳುತ್ತಾರೆ.)

ಬಸವಯ್ಯ—ಸೋಮಯ್ಯ, ನಮ್ಮಯ್ಯ ಮಡಿವ ವೇಳೆ ನೀನು ಬಳಿಯಿದ್ದೆಯೇನು ?

ಸೋಮಯ್ಯ—ಹೌದು, ಅದು ನನ್ನ ಪುಣ್ಯ.

ಬಸವಯ್ಯ—ಉತ್ಕ್ರಮಣಕಾಲದಲಿ ಬಹಳ ಯಾತನೆಯಾಯ್ತೆ ?

ಸೋಮಯ್ಯ—ಇಲ್ಲ, ಒಂದಿನಿತೂ ಯಾತನೆಪಡಲಿಲ್ಲ. ಬಹಳ ಶಾಂತಿಯಿಂದೇ ಶಿವೈಕ್ಯರಾದರು. ಅದನು ನೋಡಿದ ನನಗೆ ಮರಣದಲ್ಲಿದ್ದ ಭೀತಿ ಕೂಡ ತೊಲಗಿಬಿಟ್ಟಿದೆ.

ಬಸವಯ್ಯ—ನನಗೇನಾದರೂ ಹೇಳಿದರೆ ?

ಸೋಮಯ್ಯ—"ವ್ಯಸನಪಡುವುದು ಬೇಡ. ಧೀರನಾಗಿ ರಾಜ್ಯಭಾರ ಮಾಡಲಿ" ಎಂದರು. ಅಳುತಿದ್ದ ಲಿಂಗಣ್ಣ ಮಂತ್ರಿಗಳನು ಕುರಿತು, "ಲಿಂಗಣ್ಣನವರೆ, ನೀವೂ ನಿಂಬಯ್ಯನೂ ಸೇರಿ ರಾಜ್ಯ ಪರಹಸ್ತಗತವಾಗದಂತೆ ನೋಡಿಕೊಳ್ಳುತ್ತ ನನ್ನ ಮಗನನು ಕಾಪಾಡಿಕೊಂಡು ಬನ್ನಿ" ಎಂದರು.

ಬಸವಯ್ಯ—ಅಯ್ಯೋ ನನ್ನಾ ಪಾಳು ಬೇಂಟೆಗೆ ಬೆಂಕಿ ಹಾಕಲಿ! ಆ ದಿನವೆ ನಿಂಬಯ್ಯನವರ ನುಡಿಗೇಳಿ ಬೇಂಟೆಗೈದಿ ಎಂತಹ ಮಹಾಪರಾಧ ಮಾಡಿದೆ?— ನಮ್ಮ ಮಲತಾಯಿ ಚೆಲುವಾಂಬೆ ಇದ್ದರೇ ಅಲ್ಲಿ ?

ಸೋಮಯ್ಯ—ಇಲ್ಲ, ಅವರು ಬರುವನಿತರೊಳೆ ಹರಣಹೋಗಿತ್ತು.

ಬಸವಯ್ಯ (ಆಕಾಶದ ಕಡೆ ನೋಡಿ)—ಹಾಳು ಬೇಂಟೆಯೆ !

ಸೋಮಯ್ಯ—ಎಷ್ಟು ದಿನವೆಂದು ನೀನಿಂತು ದುಃಖಿಸುವುದು, ಬಸವಯ್ಯ ? ನೀನು, ಹೊನ್ನಯ್ಯ, ಶಿವಯ್ಯ, ನಾನು ಎಲ್ಲರೂ ಗುರುಗಳ ಬಳಿ ವೇದಾಂತ ಓದು

ತ್ತಿದ್ದಾಗ ಅವರು ಉಪದೇಶ ಮಾಡಲಿಲ್ಲವೆ "ಹುಟ್ಟು ಸಾವುಗಳೆಲ್ಲ ಮಾಯೆ. ಧೀರರು ಮರುಗಬಾರದು" ಎಂದು?

ಬಸವಯ್ಯ—ಅಹುದು, ಸೋಮಯ್ಯ, ಅದೆಲ್ಲವೂ ನಿಜವೇ ಅಹುದು. ಆದರೆ ಆಗ ತಂದೆಯಳಿದಿರಲಿಲ್ಲ; ಕಷ್ಟ ಬಂದಿರಲಿಲ್ಲ. ಸುಖವಿರಲು ಎಲ್ಲ ಮಾಯೆ ಎಂದು ಸುಖಪಡಬಹುದು. ದುಃಖಬರಲು ಎಲ್ಲ ಮಾಯೆ ಎಂದು ದುಃಖಪಡುವುದು ಕಷ್ಟ! ಸೋಮಯ್ಯ, ನಿನ್ನನೊಂದು ಮಾತು ಕೇಳುತ್ತೇನೆ. ನೀನು ನನ್ನ ಸಹಪಾಠಿ—ಇದರಲ್ಲಿ ಏನೋ ಮೋಸ ನಡೆದಿಲ್ಲವೆ? ನನ್ನಾಣೆ, ಹೇಳು!

ಸೋಮಯ್ಯ—ಯಾವುದರಲ್ಲಿ? (ಬಸವಯ್ಯ ಸುಮ್ಮನಿರುವನು.) ನೀನು ಹೇಳುವುದು ನನಗೆ ಸ್ವಲ್ಪವೂ ಅರ್ಥವಾಗುವುದಿಲ್ಲ.

ಬಸವಯ್ಯ—ಹೋಗಲಿ ಬಿಡು, ಸೋಮಯ್ಯ!—ನನಗೀಗ ಒಂಟಿಯಾಗಿರಬೇಕೆಂಬು ವಾಸೆ. ನೀನು . . .

ಸೋಮಯ್ಯ—ಆಗಲಿ, ಹೊರಡುತ್ತೇನೆ. (ಎದ್ದು ನಿಲ್ಲುವನು.)

ಬಸವಯ್ಯ—ಬೇಸರಪಡದಿರು. ನಾಳೆ ಬಾ.

ಸೋಮಯ್ಯ—ಬೇಸರವೇಕೆ? ಬರುತ್ತೇನೆ.

(ಸೋಮಯ್ಯನು ಹೋಗುತ್ತಾನೆ. ಬಸವಯ್ಯನು ಅವನನ್ನೇ ಎವೆಯಿಕ್ಕದೆ ನೋಡುತ್ತ ನಿಟ್ಟುಸಿರು ಬಿಟ್ಟು)

ಬಸವಯ್ಯ—ಇವರೆಲ್ಲರೂ ಮೋಸಗಾರರೋ? ಅಥವಾ
ನನ್ನೊಳಿಹ ಮೋಸವೇ ಇತರರಲಿ ಮೋಸವನು
ತೋರುತಿಹುದೋ? ಇರಲಿ, ಕಾದು ನಿರ್ಣಯಿಸುವೆನು.
ಬಣ್ಣಬಣ್ಣದ ಸ್ವಪ್ನಗೋಲದೊಲ್ ಮುಚ್ಚಿರುವ
ಈ ಬದುಕು ಕವಿಯುವುದು ಸತ್ಯಧವಳತೆಯನ್ನೆ
ಬಣ್ಣ ಬಣ್ಣದಿ ಬಿಚ್ಚಿ. ಹುಚ್ಚು ಹುಚ್ಚಿಗೆ ಮೆಚ್ಚು;
ಇಲ್ಲದಿರೆ ಪೆಚ್ಚು. ಬಹು ಸಂಖ್ಯೆ ಹುಚ್ಚರಿರೆ
ಹುಚ್ಚನಲ್ಲದ ನರನೆ ಹುಚ್ಚಾಗಿ ತೋರುವನು.—
ಆದರೂ ಅಂತರಾತ್ಮವು ಗೊಣಗುತಿದೆ ಏನೊ
ಮೋಸ ನಡೆದಿದೆ ಎಂದು.—
ಯಾರಲ್ಲಿ? ಹೊನ್ನಯ್ಯ!

[ಹೊನ್ನಯ್ಯ ಬರುವನು.]

ಬಂದೆಯಾ? ಕುಳಿತುಕೋ! (ಹೊನ್ನಯ್ಯ ಕುಳಿತುಕೊಳ್ಳುವನು.)

ಹೊನ್ನಯ್ಯ (ಸ್ವಲ್ಪ ಅವಸರವಾಗಿ ಮಾತಾಡುವನು.)—ವಿಶೇಷವೊಂದಿದೆ. ನಿನಗೆ ಹೇಳಲು ಬಂದೆ.

ಬಸವಯ್ಯ—ಇದೇನು? ಬೆಚ್ಚಿದಂತಿವೆ ನಿನ್ನ ಕಣ್ಣು!

ಹೊನ್ನಯ್ಯ—ಬಹಳ ಸೋಜಿಗದ ಸಂಗತಿ. ನಿಮ್ಮ ತೀರಿಹೋದ ತಂದೆ . . .

ಬಸವಯ್ಯ—ಏನು!

ಹೊನ್ನಯ್ಯ—ನಾನು ಕಂಡೆ!

ಬಸವಯ್ಯ—ಏನೇನು! ಹೇಳು!

ಹೊನ್ನಯ್ಯ—ಉಮ್ಮಳಿಸದಿರು. ಶಾಂತಿಯಿಂದ ಕೇಳು. ಸ್ವರ್ಗಸ್ಥರಾದ ನಮ್ಮ ಮಹಾರಾಜರು ಬಸಪ್ಪನಾಯಕರನು ಕಂಡೆ.

ಬಸವಯ್ಯ—ಆಂ! ಯಾವಾಗ?

ಹೊನ್ನಯ್ಯ—ಕಳೆದಿರುಳಿನಲ್ಲಿ!

ಬಸವಯ್ಯ—ನಾನೂ ಕಂಡಿದ್ದೆ, ಕನಸಿನಲ್ಲಿ.

ಹೊನ್ನಯ್ಯ—ನಾನು ಕಂಡಿದ್ದು ಕನಸಿನಲ್ಲಲ್ಲ. ಅರಮನೆಯ ಹೆಬ್ಬಾಗಿಲ ಬಳಿಯಲ್ಲಿ; ಚೆನ್ನಾಗಿ ಎಚ್ಚತ್ತ ವೇಳೆ; ಕಾವಲುಗಾರ ಕೆಂಚಣ್ಣನ ಜೊತೆಯಲ್ಲಿ!

ಬಸವಯ್ಯ—ಅಯ್ಯೋ ಶಿವನೇ, ಸರಿಯಾಗಿ ತಿಳುಹಯ್ಯ.

ಹೊನ್ನಯ್ಯ—ಮೊನ್ನೆಯಿರುಳು ಕೆಂಚಣ್ಣ ಕಾವಲಿದ್ದಾಗ ಬೆಳಗಿನ ಜಾವದ ಹೊತ್ತು ಕಾಣಿಸಿಕೊಂಡಿತಂತೆ. ಅವನು ಬಂದು ನನಗೆ ಹೇಳಲು ನಾನು ಸುಳ್ಳೆಂದೇ ತಿಳಿದು ಪರೀಕ್ಷಿಸಲು ಹೋದೆ ನಿನ್ನೆಯಿರುಳು.

ಬಸವಯ್ಯ—ಆಮೇಲೆ?

ಹೊನ್ನಯ್ಯ—ನಿನ್ನೆಯಿರುಳೂ ಮರಳಿ ಕಾಣಿಸಿತು. ನೋಡಿದರೆ
ಗತಿಸಿದಾ ಬಸವನಾಯಕರಂತೆ ವೇಷವನು
ತಳೆದಿತ್ತು. ಕೈತವವೊ? ಸತ್ಯವೋ? ನಾನರಿಯೆ.
ಬೆಳ್ದಿಂಗಳಾ ಮಬ್ಬು ಮಾಯೆಯಲಿ ಹಿರಿದಾಗಿ
ತೋರಿತು. ಕೆಂಚಣ್ಣ ಭಯದಿಂದೆ ನಡುನಡುಗಿ
ಸೆಡೆತು ಗೋಣುದ್ದವಾದನು! ನನ್ನೆದೆಯೂ
ನಡುಗದಿರಲಿಲ್ಲ.

ಬಸವಯ್ಯ—　　　　　　ನುಡಿಸಿದೆಯಾ?

ಹೊನ್ನಯ್ಯ—　　　　　　ಹೌದು.
ಆದರೇಂ? ಕೋಪದಲಿ ನೋಡುತ್ತೆ ನೋಡುತ್ತೆ
ಮುಗಿಲಿನೊಲು ತೇಲುತ್ತೆ ಮಾಯವಾಯಿತು ಕಡೆಗೆ.

ಬಸವಯ್ಯ—ಆಶ್ಚರ್ಯ! ಮೊಗದೊಳಾವ ಕಳೆ ಮೆರೆದಿತ್ತು?
ಹೊನ್ನಯ್ಯ—ದುಗುಡವೆಂದೇ ಹೇಳಲಹುದು.
ಬಸವಯ್ಯ— ಏನುಡುಗೆ?
ಹೊನ್ನಯ್ಯ—ಉಡುಗೆಯೇ? ಬಸವನಾಯಕರರಸುವೇಷ!
ಆ ನಡಿಗೆ, ಆ ನೋಟ, ಆ ಹಿರಿಯ ಗಾಂಭೀರ್ಯ
ಎಲ್ಲವೂ ನಿಮ್ಮ ತಂದೆಯನೆ ಹೋಲಿತ್ತು.
ನಿನ್ನೊಡನೆ ಅದು ನುಡಿಯಬಹುದೆಂದು, ನಿನಗೆ
ಹೇಳುವುದುಚಿತವೆಂದು ತಿಳಿಸಿದೆನು.
ಬಸವಯ್ಯ— ಒಳ್ಳಿತಾಯ್ತು.
ಇಂದು ಕಾಯುವಿರೇನು?
ಹೊನ್ನಯ್ಯ— ನೀ ಬರುವುದಾದರೆ.
ಬಸವಯ್ಯ—ಇದರೊಳೇನೊ ರಹಸ್ಯವಿರಬೇಕು. ಬರುತ್ತೇನೆ.
ಇನ್ನಾರಿಗೂ ಹೇಳಲಿಲ್ಲಷ್ಟೆ?
ಹೊನ್ನಯ್ಯ— ಇಲ್ಲ, ಇಲ್ಲ.
ನೀನೆ ಮೊದಲನೆಯವನು.
ಬಸವಯ್ಯ— ಯಾರಿಗಿದನರುಹದಿರಿ.
ಹೊನ್ನಯ್ಯ—ನಾನು ತೆರಳುತ್ತೇನೆ. ಯಾವಾಗ ಬರುವೆ?
ಬಸವಯ್ಯ—ನಡುರಾತ್ರಿ! (ಹೊನ್ನಯ್ಯ ತೆರಳುವನು.)
ನನ್ನ ತಂದೆಯು ಪ್ರೇತ! ಎಲ್ಲ ಶುಭವಾಗಿಲ್ಲ!
ಒಂದಲ್ಲ ಒಂದು ದಿನ ಪಾಪ ಬಯಲಹುದು!

(ಎದ್ದು ಹಿಂದೆ ಮುಂದೆ ತಿರುಗಾಡಲಾರಂಭಿಸುತ್ತಾನೆ.)

[ಪರದೆ ಬೀಳುವುದು.]

## ದೃಶ್ಯ ೩

[ಅರಮನೆಯ ಇನ್ನೊಂದು ಭಾಗ. ಚೆಲುವಾಂಬೆ ನಿಂಬಯ್ಯರು ಕೈ ಕೈ ಹಿಡಿದುಕೊಂಡು ಬರುತ್ತಾರೆ.]

ಚೆಲುವಾಂಬೆ—ಪ್ರಿಯನೇ, ನಮ್ಮ ವ್ಯೂಹಗಳೆಲ್ಲ ಇದುವರೆಗೆ
ಎಡರರಿಯದಾಗಿಹವು. ಇನ್ನುಳಿದೆಡರುಗಳೂ
ನೇಸರೇಳ್ಗೆಯ ಮುಂದೆ ಪೊಳ್ತರೆಯ ಹಿಮದಂತೆ

ಕರಗುವುವು. ಹಿಡಿದ ಕಜ್ಜವನೊಮ್ಮೆ ಅರೆಮುಗಿಸಿ
ಬಿಡುವುದುಚಿತಮಲ್ತು; ಕೊನೆಗಾಣಿಸಲೆ ಬೇಕು.

**ನಿಂಬಯ್ಯ**—ದೇವೀ,
ನಿನ್ನಾಣತಿಯು ನೆರವಿರಲು ನನಗೆ, ನಿನ್ನೊಲ್ಮೆ
ಉತ್ಸಾಹವೀಯುತಿರೆ ನೀನೆಳಸಿದೆಸಕವನು
ನಿರ್ಭೀತಿಯಿಂದೆ ಮಾಡಿಯೆ ಮಾಡುವೆನು. ಬೆಸನು.

**ಚೆಲುವಾಂಬೆ**—ಈ ಗುಟ್ಟು ಬಯಲಾಗದಂದದಲಿ ಎಚ್ಚರಿಕೆ
ಯಿಂದಿರುವುದೆಮ್ಮ ಕರ್ತವ್ಯ.

**ನಿಂಬಯ್ಯ**— ಅದಕಾನು ಹೊಣೆ.
ತಿಮ್ಮಜಟ್ಟಿಯು ಹೊರತು ಉಳಿದಾರಿಗೂ ಗುಟ್ಟು
ಗೊತ್ತಿಲ್ಲ. 'ಎಲ್ಲಿಯಾದರೂ ಗುಟ್ಟು ಬಯಲಾಗೆ
ನಿನಗೆ ಮರಣವೆ ಸಿದ್ಧ' ಎಂದಾನು ಬೆದರಿಸಿಹೆ.

**ಚೆಲುವಾಂಬೆ**—ಆ ವೈದ್ಯ?

**ನಿಂಬಯ್ಯ**— ಪ್ರೇಯಸಿ, ಆ ವೈದ್ಯನಾರೆಂದೆ?
ತಿಮ್ಮಜಟ್ಟಿಯೆ ಛದ್ಮವೇಷದಲಿ ಐತಂದು
ಮದ್ದಿನಲಿ ವಿಷವನಡಗಿಸಿಕೊಟ್ಟ ವೈದ್ಯ.

(ಇಬ್ಬರೂ ಕುಳಿತುಕೊಳ್ಳುವರು.)

**ಚೆಲುವಾಂಬೆ**—ನಮ್ಮ ಸುಖಕಿನ್ನೆನಿತು ಬಲಿಬೇಕೊ ನಾನರಿಯೆ.

**ನಿಂಬಯ್ಯ**—ಅದಕೇನು? ನಾನಿಹೆನು! ತಿಮ್ಮಜಟ್ಟಿಯಿರುವನು! ಅಗೋ ತಿಮ್ಮ ಜಟ್ಟಿ!

[ತಿಮ್ಮಜಟ್ಟಿ ಬರುವನು.]

**ತಿಮ್ಮಜಟ್ಟಿ**—ರಾಣಿಯವರ ಪಾದಕ್ಕೆ ಬಿದ್ದೆ! ರಾಜರಿಗೆ ಕೈಮುಗಿದೆ!

**ನಿಂಬಯ್ಯ**—ಜಟ್ಟಿ, ಏನು ಸಮಾಚಾರ ಊರಿನಲ್ಲಿ?

**ತಿಮ್ಮಜಟ್ಟಿ**—ದೊರೆಗಳ ಆಕಸ್ಮಿಕಮರಣದ ವಿಚಾರವಾಗಿ ಜನರಲ್ಲಿ ವಾದ ವಿವಾದ ನಡೆಯುತ್ತಿವೆ. ಮತ್ತೆ ಕೆಲವರು ರಾಜಕುಮಾರ ಬಸವಯ್ಯನವರ ಪಟ್ಟಾಭಿಷೇಕ ಮಹೋತ್ಸವವನ್ನೆ ಎದುರುನೋಡುತ್ತಿದ್ದಾರೆ.

**ಚೆಲುವಾಂಬೆ**—ಅದಿರಲಿ! ನಮ್ಮಮೇಲೇನಾದರೂ ದೂರು ಹುಟ್ಟಿದೆಯೊ?

**ತಿಮ್ಮಜಟ್ಟಿ**—ಏನೊ ತಾಯಿ? ನನ್ನ ಕಿವಿಗಿನ್ನೂ ಬಿದ್ದಿಲ್ಲ.

**ಚೆಲುವಾಂಬೆ**—ನಿಜವಾಗಿ ಹೇಳು!

ತಿಮ್ಮಜಟ್ಟಿ—ಇಲ್ಲ, ಮಹತಾಯಿ. ತಮ್ಮೊಡನೆ ಸುಳ್ಳಾಡುವುದೆ?
ಚೆಲುವಾಂಬೆ—ರಹಸ್ಯವನು ಯಾರೊಡನೆಯೂ ಹೇಳಕೂಡದು.
ತಿಮ್ಮಜಟ್ಟಿ—ಎಲ್ಲಾದರೂ ಉಂಟೆ, ತಾಯಿ?
ಚೆಲುವಾಂಬೆ—ನಿನಗೆ ಅಧಿಕಾರ, ಐಶ್ವರ್ಯ ಎಲ್ಲ ದೊರಕುವುದು.
ತಿಮ್ಮಜಟ್ಟಿ—ತಮ್ಮ ಅನುಗ್ರಹ.
ನಿಂಬಯ್ಯ—ನೀನು ಮಾಡಬೇಕಾಗಿರುವ ಕೆಲಸ ಇನ್ನೂ ಇದೆ.
ತಿಮ್ಮಜಟ್ಟಿ—ಸಿದ್ಧನಾಗಿದ್ದೇನೆ.
ನಿಂಬಯ್ಯ—ನಮ್ಮ ಮೇಲೆ ಯಾರಾದರೂ ಸಂದೇಹದ ಮಾತನಾಡಿದರೆ ಕೂಡಲೆ ಬಂದು ತಿಳುಹಬೇಕು.
ತಿಮ್ಮಜಟ್ಟಿ—ಅಪ್ಪಣೆ!
ನಿಂಬಯ್ಯ—ಸಮಯಬಂದರೆ ಅವರನ್ನೂ . . . ತಿಳಿಯಿತೆ?
ತಿಮ್ಮಜಟ್ಟಿ—ತಿಳಿಯಿತು, ಮಹಾಸ್ವಾಮಿ.
ನಿಂಬಯ್ಯ—ಬಸವಯ್ಯ, ಲಿಂಗಣ್ಣ ಮಂತ್ರಿ ಮತ್ತು ಇವರ ಆಪ್ತಾನುಚರರ ಮಾತುಕತೆಗಳನ್ನು ಚೆನ್ನಾಗಿ ಪರಿಶೀಲಿಸುತ್ತಿರಬೇಕು.
ತಿಮ್ಮಜಟ್ಟಿ—ನಾನದೇ ಕೆಲಸದಲ್ಲಿದ್ದೇನೆ, ದೇವರೂ.
ಚೆಲುವಾಂಬೆ—ಈಗ ನಡೆ; ಬಂದು ಕಾಣುತ್ತಿರು—ದಿನಕ್ಕೊಂದು ಬಾರಿ.

(ತಿಮ್ಮಜಟ್ಟಿ ನಮಸ್ಕಾರಮಾಡಿ ಹೋಗುವನು.)

ನಿಂಬಯ್ಯ—ಪ್ರಿಯೆ,

ಲಿಂಗಣ್ಣ ಮಂತ್ರಿಯಲಿ ನನಗೆ ಸಂಶಯವಿಲ್ಲ;
ಮುದುಕನಾಗಿಹನವನು. ಆದರಾ ಬಸವಯ್ಯ!
ಅವನ ರೀತಿಯೊಳೇನೊ ಪ್ರಮಾದವೇ ತೋರುತಿದೆ.
ಅವನ ಶೋಕದೊಳೇನೊ ರೋಷವಿರುವಂತಿದೆ.
ಅವನಾ ಮಾತುಗಳೂ ವ್ಯಂಗ್ಯಪೂರ್ಣವಾಗಿವೆ.
ಮೇಲೆ ಮೇಲವನಾಡುವುದಕಿಂತಲೂ ಅವನಿಗೆ
ಮಿಗಿಲಾಗಿ ತಿಳಿದಿಹುದು.

[ದ್ವಾರಪಾಲಕ ಬರುತ್ತಾನೆ.]

ದ್ವಾರಪಾಲಕ—ಲಿಂಗಣ್ಣ ಮಂತ್ರಿಗಳು ದಯಮಾಡಿಸಿದ್ದಾರೆ.
ಚೆಲುವಾಂಬೆ—ಒಳಹೇಳು. (ದ್ವಾರಪಾಲಕನು ಹೋದಮೇಲೆ ನಿಂಬಯ್ಯನಿಗೆ) ನೀನಾ ಕೊಟಡಿಯಲ್ಲಿ ಅಡಗಿರು. ನೀನಿದ್ದರವನು ಎದೆ ಮುಚ್ಚಿ ಮಾತಾಡುವನು.

(ನಿಂಬಯ್ಯ ಅಡಗುವನು.)

[ಲಿಂಗಣ್ಣ ಮಂತ್ರಿ ಬರುತ್ತಾನೆ. ರಾಣಿ ಜಗ್ಗನೆದ್ದು]

**ಚೆಲುವಾಂಬೆ**—ಬನ್ನಿ ಮಂತ್ರಿಗಳೆ. (ಪೀಠವನ್ನು ತೋರಿಸುವಳು. ಇಬ್ಬರೂ ಕುಳಿತು ಕೊಳ್ಳುವರು.)

**ಲಿಂಗಣ್ಣ**—ದೇವಿ, ನಿನ್ನೊಡನೊಂದು ವಿಶೇಷವನು ಕುರಿತು ಮಾತನಾಡಲು ಬಂದೆ.

(ಸುತ್ತ ನೋಡುವನು.)

**ಚೆಲುವಾಂಬೆ**—ಇಲ್ಲಿ, ಇನ್ನಾರೂ ಇಲ್ಲ. ತಾವು ಧೈರ್ಯವಾಗಿ ಮಾತಾಡಬಹುದು.

**ಲಿಂಗಣ್ಣ**—ಮಹಾರಾಜರ ಮರಣದಿಂದ ಬಿದನೂರು ರಾಜ್ಯವೇ ಅಲ್ಲೋಲ ಕಲ್ಲೋಲವಾದಂತಿದೆ. ನಾವೀಗ ಪ್ರಜಾಮತಕ್ಕೆ ವಿರೋಧವಾಗದಂತೆ ಎಚ್ಚರಿಕೆಯಿಂದ ನಡೆಯಬೇಕು.

**ಚೆಲುವಾಂಬೆ**—ತಮ್ಮಂತಹ ಮಂತ್ರಿವರ್ಯರ ನೆರವಿರಲು ಅದಾವ ಮಹಾಕಾರ್ಯ ನನಗೆ?

**ಲಿಂಗಣ್ಣ**—ಆಳುವವರ ಬಲವೂ ಒಲವೂ ಇದ್ದರಲ್ಲವೆ ಮಂತ್ರಿ ಕೆಲಸಮಾಡಬಲ್ಲನು?

**ಚೆಲುವಾಂಬೆ**—ನಿಮಗೀಗ ಕಡಿಮೆಯಾದುದೇನು? ನಾನು ತಮ್ಮ ಪುತ್ರಿಯಂತಿರುವೆನಷ್ಟೆ?

**ಲಿಂಗಣ್ಣ**—ನೀನೇನೊ ಇದ್ದೀಯೆ. ಆದರೆ ಬಸವಯ್ಯ . . .

**ಚೆಲುವಾಂಬೆ**—ಆತನೂ ನಿಮ್ಮಲ್ಲಿ ಗುರುಭಾವವನ್ನಿಟ್ಟುಕೊಂಡಿರುವನಲ್ಲವೆ?

**ಲಿಂಗಣ್ಣ**—ಅದೇನೊ ದಿಟವೆ. ಆದರೆ ಆತನಿನ್ನೂ ತರುಣ. ತಂದೆ ತೀರಿಹೋದ ಶೋಕಭಾರದಿಂದ ಬೇರೆ ಮನಸ್ಸು ಕದಡಿಹೋದಂತಿದೆ. ಮೊದಲೇ ಸ್ವಭಾವತಃ ಸ್ವಪ್ನಜೀವಿ. ಒಬ್ಬನೆ ಕುಳಿತುಕೊಂಡು ಏನೇನೊ ಭಾವಗಳನು ಕಲ್ಪಿಸಿಕೊಂಡು ಸುಮ್ಮನೆ ಕೊರಗುತ್ತಾನೆ.

**ಚೆಲುವಾಂಬೆ**—ನೀವೇ ಹೇಳಿ, ನಾನೇನು ಮಾಡಲಿ? ನಾನೂ ಎಷ್ಟೆಷ್ಟೋ ಸಮಾಧಾನ ಹೇಳಿಯಾಯಿತು.

**ಲಿಂಗಣ್ಣ**—ನಿನ್ನಿಂದಲೆ ಪರಿಹಾರವಾಗಬೇಕು ಅವನ ಸಂದೇಹ.

**ಚೆಲುವಾಂಬೆ** (ಬೆಚ್ಚಿ)—ಸಂದೇಹ?

**ಲಿಂಗಣ್ಣ**—ನಾನು ಮೊದಲೇ ಹೇಳಲಿಲ್ಲವೆ, ಹುಡುಗ ಎಂದು? ನಿರಾಧಾರವಾದ ಸಂಶಯ ಕೀಟವೊಂದು ಆತನ ಮೆದುಳನು ಕೊರೆಯುತ್ತಿದೆ, ಎಂದು ಊಹಿಸುತ್ತೇನೆ. ನನ್ನ ಊಹನೆಯಷ್ಟೆ?

**ಚೆಲುವಾಂಬೆ**—ಅದೇನದು?

**ಲಿಂಗಣ್ಣ**—ಅದೇನಾದರಾಗಲಿ! ನಿಂಬಯ್ಯನೊಡನೆ ನೀನು ಹೆಚ್ಚು ಸಲಿಗೆಯಿಂದಿರು

ವುದು ಆತನಿಗೆ ಸರಿಬಿದ್ದಂತೆ ತೋರುವುದಿಲ್ಲ. ತಿರುಳಿಲ್ಲದ ಮಾತು! ಆದರೂ ರಾಜಕೀಯ ದೃಷ್ಟಿಯಿಂದ ಸ್ವಲ್ಪ ಎಚ್ಚರಿಕೆಯಿಂದಿರುವುದೆ ಮೇಲು.

ಚೆಲುವಾಂಬೆ—ರಾಜಕೀಯ ದೃಷ್ಟಿಯಿಂದೇ ಅಲ್ಲವೆ ನಾನು ನಿಂಬಯ್ಯನವರೊಡನೆ ಸಲಿಗೆಯಿಂದಿರುವುದು. ನಿಮ್ಮೊಡನೆ ಸಲಿಗೆಯಿಂದಿಲ್ಲವೆ?

ಲಿಂಗಣ್ಣ—ಹೌದು, ನಾನಾತನಿಗೆ ಇದೆಲ್ಲವನ್ನೂ ಹೇಳಿದ್ದೇನೆ.

ಚೆಲುವಾಂಬೆ—ಆಗಲಿ, ರಾಜಕುಮಾರನಿಚ್ಛೆ!—ನಿಮ್ಮ ಮಗಳು ರುದ್ರಾಂಬೆಯನು ಇಲ್ಲಿಗೆ ಕಳುಹಿಸುವಿರಾ? ಆಕೆ ಜೊತೆಯಲ್ಲಿದ್ದರೆ ನನಗೆಷ್ಟೋ ಶಾಂತಿ, ಸಂತೋಷ.

ಲಿಂಗಣ್ಣ—ಅವಳೂ ನಿನ್ನಲ್ಲಿಗೆ ಬರಲು ಕಾತರಳಾಗಿದ್ದಳು.

ಚೆಲುವಾಂಬೆ—ಕಳುಹಿಸಿಕೊಡಿ.

ಲಿಂಗಣ್ಣ—ಅಗತ್ಯವಾಗಿ.—ನಾನೀಗ ಬರುತ್ತೇನೆ. (ಏಳುತ್ತಾನೆ. ರಾಣಿಯೂ ಏಳುತ್ತಾಳೆ.) ನಾನು ಹೇಳಿದುದು ಅನ್ಯಥಾ ಭಾವಿಸಬಾರದು.

ಚೆಲುವಾಂಬೆ—ಹೇಳಿದರೇನು? ನಮ್ಮ ಅಭ್ಯುದಯಕ್ಕಾಗಿಯೇ ಅಲ್ಲವೆ?

[ಲಿಂಗಣ್ಣ ಮಂತ್ರಿ ಹೋಗುತ್ತಾನೆ. ನಿಂಬಯ್ಯ ಬಂದು]

ನಿಂಬಯ್ಯ— ನಾನು ಹೇಳಿದುದೇನು! ಬಸವಯ್ಯನೆದೆಯಲ್ಲಿ
ಕಾಣುವುದಕಿಂತಲೂ ಹೆಚ್ಚಾಗಿ ಹುದುಗಿಹುದು.
ಸ್ವಪ್ನಸ್ಥರಂತಿರುವ ಯುವಕರನು ನಾವೆಂದೂ
ನಂಬಬಾರದು; ನಂಬಿದರೆ ಕೇಡು. ಅಂತಹರು
ಹಾವಿರುವ ಹುತ್ತಗಳು. ಅವರ ನಾಡಿಗಳೆಲ್ಲ
ಹೆಡೆಯೆತ್ತಿರುವ ಮಾರುವೇಷದ ಸರ್ಪಗಳು.
ಅವರ ಒಂದೊಂದು ಕನಸಿನ ನಡುವೆ ಹುದುಗಿಹವು
ನೂರಾರು ವಿಲಯಕಾಲದ ಸಿಡಿಲು ಮಿಂಚುಗಳು.
ನಾವಿನ್ನು ಬಹಳ ಎಚ್ಚರಿಕೆಯಿಂದಿರದಿದ್ದರೆ
ಗುಟ್ಟೆಲ್ಲ ರಟ್ಟಾಗಿ ನಮಗಶುಭವಾಗಬಹುದು.

ಚೆಲುವಾಂಬೆ—ಮುಂದೇನು ಮಾಡುವುದು!

ನಿಂಬಯ್ಯ— ಮುಂದೇನು ಮಾಡುವುದೆ?
ಮಾಡಬೇಕಾದುದನು ಮಾಡುವುದು!

ಚೆಲುವಾಂಬೆ— ಹಾಗೆಂದರೆ?

ನಿಂಬಯ್ಯ—ಬಸವಯ್ಯನನು ಹಿಡಿದು ಸಂಹರಿಸಿ, ಲಿಂಗಣ್ಣ
ಮಂತ್ರಿಯನು ಸೆರೆಯಿಟ್ಟು ದರ್ಪದಿಂದಾಳುವುದು!

ಚೆಲುವಾಂಬೆ—ನಿಂಬಯ್ಯ, ನಾನಿದಕೆ ಸಮ್ಮತಿಸಲೊಲ್ಲೆ.
ನಿನ್ನ ಸಂಗವ ಪಡೆಯಲೆಂದು ಮಾತ್ರವೆ ನಾನು
ದೊರೆಯ ಕೊಲ್ಲಲು ಮನಸುಮಾಡಿದೆನೆ ಹೊರತು
ರಾಜ್ಯಾಭಿಲಾಷೆಯಿಂದಲ್ಲ.

ನಿಂಬಯ್ಯ— ಪ್ರಿಯೆ, ಎನಿತು ದಿನ
ಗುಟ್ಟಾಗಿ ಜೀವಿಪೆವು? ಒಂದಲ್ಲವೊಂದುದಿನ
ಬಯಲಾಗದಿರದು ನಮ್ಮಿರ್ವರೊಲ್ಮೆವೇಟಂ!
ಆಗೆಮ್ಮ ಗತಿಯೇನು? ಒಂದಲ್ಲವೊಂದುದಿನ
ದೊರೆಯ ಸಾವಿಗೆ ನಿಜದ ಕಾರಣ ಬಯಲಿಗೆ
ಬೀಳುವುದು! ಆಗೆಮ್ಮ ಗತಿಯೇನು? ರಾಜ್ಯವಿರೆ,
ಕೈಯಲ್ಲಿ ದರ್ಪವಿರೆ ಆರನೂ ಲೆಕ್ಕಿಸದೆ
ಸುಖದಿಂದೆ ಬಾಳಬಹುದು. ಇಲ್ಲದರೆ ನಾವೆಲ್ಲಿ?
ಪಾಪಿಗಳು ಇವರೆಂದು ತಳ್ಳುವರು ಸೆರೆಮನೆಗೆ!
ಇಲ್ಲದರೆ ಮರಣದಂಡನೆ ವಿಧಿಸಿ ಕೊಲ್ಲುವರು!
ನಮ್ಮ ಪ್ರೇಮೋದ್ಯಾನವೇ ಮಸಣವಾದಪುದೆಮಗೆ!
ನಮ್ಮ ಅಧರಾಮೃತವೆ ಗರಳವಾಗುವುದೆಮಗೆ!
ಅದರಿಂದೆ ನಮ್ಮ ಮೊದಲಿನ ಬಯಕೆ ಬಸವಯ್ಯ
ಲಿಂಗಣ್ಣ ಮಂತ್ರಿಗಳ ಸಾವಲ್ಲದಿದ್ದರೂ
ಅದರಿಂದಲೇ ಈಗ ನಮ್ಮ ಮೊದಲಿನ ಬಯಕೆ
ಸಿದ್ಧಿಪುದು; ಶಾಶ್ವತದಿ ಬಾಳುವುದು! ಓ ಪ್ರಿಯೆ,
ಇಟ್ಟ ಹಜ್ಜೆಯ ಮರಳಿ ಹಿಂತೆಗೆವುದೇಕೆ?
ಹಸಿಯಾದರೇನಂತೆ? ಹೊಳೆಯಾದರೇನಂತೆ?
ರಕ್ತವೆಂದೂ ರಕ್ತ! ನಾನಿಹೆನು; ಹೆದರದಿರು!

ಚೆಲುವಾಂಬೆ (ಸುಯ್ದು)—ಇಂತಾಗುವುದು ಎಂದು ನಾನು ಬಗೆದಿರಲಿಲ್ಲ.
ಬಸವಯ್ಯನನು ಕೊಂದು ಮುಂದೆ ಯಾರಿಗೆ ಪಟ್ಟ?

ನಿಂಬಯ್ಯ— ಬಸವಯ್ಯನೇನು ನಿನ್ನಯ ಮಗನೆ? ಮಲತಾಯಿ
ಎಂದವನು ನಿನ್ನನೆದೆಮುಟ್ಟಿ ಹಳಿಯುತ್ತಿಹುದ
ನಾ ಬಲ್ಲೆ. ನಮ್ಮ ಸೋಮಯ್ಯನನು ದತ್ತಾಗಿ
ತೆಗೆದುಕೊಂಡರೆ ಕೆಲಸವಾಗುವುದು.

ಚೆಲುವಾಂಬೆ— ಪ್ರಿಯನೇ,

ನೀನೇಳಿದಂತಕ್ಕೆ. ದೋಣಿಯಲಿ ಕುಳಿತಾಯ್ತು.
ದೋಣಿ ತೇಲುತ್ತಿಹುದು. ಅದು ಮುಳುಗದಂದದಲಿ
ನೋಡಿಕೊಳ್ಳುವುದೆಮ್ಮ ಕರ್ತವ್ಯ.

ನಿಂಬಯ್ಯ— ಲಿಂಗಣ್ಣ
ಮಂತ್ರಿಯೇಂ ನಿಃಸ್ವಾರ್ಥಪರನೆಂದು ತಿಳಿದೆಯಾ?

**ಚೆಲುವಾಂಬಿ**—ಅಹುದು. ಸಂಶಯವೇನು?

ನಿಂಬಯ್ಯ— ನೀನರಿಯೆ! ನೀನರಿಯೆ!
ರುದ್ರಾಂಬೆಯನು ರಾಜಪುತ್ರನಿಗೆ ಕೊಟ್ಟು
ರಾಣಿಯನ್ನಾಗಿ ಮಾಡಲೆಳಸುತ್ತಿಹನು.
ಬಸವಯ್ಯನೂ ಕೂಡ ಅವಳನೊಲಿದಿರುವಂತೆ
ಸುದ್ದಿ ಒಂದಿದೆ ನನಗೆ. ನಮ್ಮ ಸಂಚುಗಳಂತೆ
ನೂರಾರು ಸಂಚುಗಳು ಸಂಚರಿಸುತಿಹವಿಲ್ಲಿ.
ತಪ್ಪಿದರೆ ನಮ್ಮೊಸಗೆಯೇ ನಮಗೆ ನೋಡಪ್ಪುದು!

[ಪರದೆ ಬೀಳುವುದು.]

## ದೃಶ್ಯ ೪

[ಬಿದನೂರಿನಲ್ಲಿ ಒಂದು ಅನ್ನಸತ್ರದ ಮೂಲೆಯ ಕೋಣೆ. ಅದರ ಹೊರಭಾಗದಲ್ಲಿ ರೈತನೊಬ್ಬನು ಕುಳಿತಿರುವನು. ಅಲ್ಲಿಗೆ ಕೆಂಚಣ್ಣ ಬರುವನು.]

**ಕೆಂಚಣ್ಣ**—ಓಹೋ ಹೋ ಏನಯ್ಯಾ, ರಂಗಣ್ಣ? ಬಹಳ ಅಪರೂಪ ದರ್ಶನ!

**ರೈತ**—ಬನ್ನಿ ಕೆಂಚಣ್ಣನವರೆ, ಕೂತುಕೊಳ್ಳಿ. (ಕೆಂಚಣ್ಣನು ಕೂತುಕೊಳ್ಳುತ್ತಾನೆ.) ನಾನೋ ಅಪರೂಪ? ನೀವೋ?

**ಕೆಂಚಣ್ಣ**—ನಿನಗೆ ನಾನು; ನನಗೆ ನೀನು.

**ರೈತ**—ನೀವು ರಾಜಾಸ್ಥಾನದಲ್ಲಿ ನೌಕರರಾಗಿಬಿಟ್ಟಿರಿ. ನಮ್ಮಂಥವರು ನಿಮ್ಮ ಕಣ್ಣಿಗೆ ಬೀಳುತ್ತೇವೆಯೆ?

**ಕೆಂಚಣ್ಣ**—ಒಳ್ಳೆಯ ನೌಕರಿಯಪ್ಪಾ! ಇರುಳೆಲ್ಲ ನಿದ್ದೆಯಿಲ್ಲದೆ ಕಾವಲ ಕಾಯುವುದು! ಅದೂ ಒಂದು ನೌಕರಿಯೆ! ಗ್ರಹಚಾರ!

**ರೈತ**—ಹಾಗೆಂದರೇನು ಸ್ವಾಮಿ? ಅರಮನೆ ಬಾಗಿಲು ಕಾವಲು ಅದೃಷ್ಟವಿಲ್ಲದೆ ಸಿಕ್ಕುತ್ತದೆಯೆ?

**ಕೆಂಚಣ್ಣ**—ಏನದೃಷ್ಟವೊ ಶಿವನೇ ಬಲ್ಲ!

ರೈತ—ಯಾಕೆ?

ಕೆಂಚಣ್ಣ—ಯಾಕೆಂದು ಹೇಳಲಿ ಹೇಳು, ರಂಗಣ್ಣ! ನನ್ನ ಗ್ರಹಚಾರ! ಹೇಳ ಬಾರದು; ಹೇಳದಿರುವುದಕ್ಕೆ ಆಗುವುದಿಲ್ಲ. ಉಭಯ ಸಂಕಟ.

ರೈತ—ನಿಮಗೇನು ಸಂಕಟ, ಸ್ವಾಮಿ? ನಮ್ಮಂತೆ ಗೆಯ್ಯಬೇಕೆ? ಉಳಬೇಕೆ? ಬಿತ್ತಬೇಕೆ? ತಲುಬು ಬರುತ್ತೆ; ಸಾವಾಸು ಸಿಗುತ್ತೆ! ನಮ್ಮಂತೆಯೋ ನಿಮ್ಮ ಜಲ್ಮ? ಮೂರು ಹೊತ್ತೂ ಕೊರತೆ! ಈಗ ನೋಡಿ, ನಮ್ಮ ಮನೆಯಲ್ಲಿ ಅವಳಿಗೆ ಮೈಮೇಲೆ ಬರುತ್ತೆ. ಹುಡುಗರಿಗೆಲ್ಲ ಏನೋ ರೋಜಿಗ. ನನಗೂ ಸುಖವೇ ಇಲ್ಲ.

ಕೆಂಚಣ್ಣ—ಚೆನ್ನಾಗಿದ್ದೀಯಲ್ಲವಯ್ಯಾ!

ರೈತ—ಮೇಲೆಮೇಲೆ ನೋಡಲು ಹಾಗೆ ಕಾಣುತ್ತೇನೆ. ಏನೋ ಕಾಟ ನನಗೆ ಒಳಗೊಳಗೇ! ನಮ್ಮದೊಂದು ಪಂಜ್ರೊಳ್ಳಿ ದೆವ್ವದಿಂದ ನನಗಂತೂ ಉಳಿಗಾಲ ವಿಲ್ಲ. ನಮ್ಮ ಮನೆ ದನಕರುಗಳಿಗೆ ಕಾಟ ಕೊಡುತ್ತೆ. ಅದಕ್ಕೇನಾದರೂ ವಿಭೂತಿ ತಂದು ಕಟ್ಟಿದರೆ ಅವಳಿಗೆ ಹಿಡಿಯುತ್ತೆ. ಅವಳನ್ನು ಬಿಟ್ಟಿತು, ಸರಿ, ಮಕ್ಕಳಿಗೆ! ಬಿಟ್ಟಿತು, ನನಗೆ! ಅಂತೂ ಸುಖವಿಲ್ಲ. ಅದಕ್ಕೆ ಈ ಸನ್ಯೇಸಿಗಳ ಹತ್ತಿರ ಏನಾದರೂ ಇಭೂತಿ ಇಸುಕೊಂಡು ಹೋಗೋಣ ಅಂತ ಒಂದೆ. ಬಹಳ ದೊಡ್ಡ ಮಹಾತ್ಮರಂತೆ! ಅವರ ಹೆಸರೇನು?

ಕೆಂಚಣ್ಣ—ತೃಣಾನಂದ ಪರಮಹಂಸರು!

ರೈತ—ಹೌದು, ಹೌದು, ಮರೆತಿದ್ದೆ. ಅಂಥಾ ದೊಡ್ಡ ಹೆಸರು ನನ್ನ ಈ ಹಾಳು ಮೆದುಳಿಗೆ ಹಿಡಿಯುವುದೇ ಇಲ್ಲ.—ಅವರು ದಿನಕ್ಕೆ ಒಂದೇ ಒಂದು ಹುಲ್ಲು ತಿನ್ನುತ್ತಾರಂತೆ, ಹೌದೇ?

ಕೆಂಚಣ್ಣ—ಕೆಲವು ದಿನ ಅದನ್ನೂ ತಿನ್ನುವುದಿಲ್ಲವಂತೆ. ಆದರೂ ನೋಡು ಹೇಗಿದ್ದಾರೆ, ಬಟ್ಟಿಗಳಂತೆ!

ರೈತ—ಅದು ಹೇಗೆ ಸ್ವಾಮಿ? ನಾವೆಷ್ಟು ತಿಂದರೂ ನಮ್ಮದು ಹಂಚಿಕಡ್ಡಿಯ ಬಾಳು!

ಕೆಂಚಣ್ಣ—ಅದೆಲ್ಲ ಯೋಗಶಕ್ತಿ ಕಾಣಯ್ಯ! ಅರಮನೆಯವರು ಕೂಡ ಇಲ್ಲಿಗೆ ಬರುತ್ತಾರೆ! ದೊಡ್ಡ ಸಂನ್ಯಾಸಿಗಳು!

ರೈತ—ಈಗ ನೀವೇಕೆ ಬಂದಿದ್ದು, ಇಲ್ಲಿಗೆ?

ಕೆಂಚಣ್ಣ—ನಾನು ಹೇಳಲಿಲ್ಲವೇ ಮೊದಲೇ, ಹೇಳಬಾರದು ಎಂದು?

ರೈತ—ಅಷ್ಟೇನು ಗುಟ್ಟು, ಸ್ವಾಮಿ?

ಕೆಂಚಣ್ಣ—ಬಹಳ ದೊಡ್ಡ ಗುಟ್ಟು! ಹೇಳಿದರೆ ನನ್ನ ತಲೆ ಹಾರಿಹೋಗುತ್ತದೆ!

ರೈತ—ಅಯ್ಯೊ, ಹಾಗಾದರೆ ನಮಗೇಕಪ್ಪಾ ಅದು?—ಹೋಗಲಿ ಎಲೆಯಡಿಕೆ ಹಾಕಿಕೊಳ್ಳಿ. (**ಎಲೆಯಡಕೆ ಚೀಲ ಕೊಡುವನು. ಕೆಂಚಣ್ಣ ಹಾಕಿಕೊಳ್ಳುತ್ತಾ**)

ಕೆಂಚಣ್ಣ—ಏನೋ ಕೇಳಿದೆಯಲ್ಲಾ ಹೇಳುತ್ತೇನೆ. ಯಾರಿಗೂ ಹೇಳಬೇಡ.

ರೈತ—ತಲೆ ಹೋಗುವ ಕೆಲಸವಾದರೆ ಬೇಡಪ್ಪಾ!

ಕೆಂಚಣ್ಣ—ಚಿಂತೆಯಿಲ್ಲ, ಹೇಳುತ್ತೇನೆ! ಆದರೆ ಗುಟ್ಟಾಗಿಟ್ಟಿರಬೇಕು.—ನಮ್ಮ ಮಹಾಸ್ವಾಮಿಯವರು ತೀರಿಕೊಂಡರಷ್ಟೇ?

ರೈತ—ಅಯ್ಯೋ ಎಂಥಾ ಮಹಾನುಭಾವರು! ಅವರ ದೊರೆತನದಲ್ಲಿ ಕ್ಷಾಮ ಕೂಡ ಕಾಲಿಟ್ಟಿರಲಿಲ್ಲ! ನಾವೆಲ್ಲ ಅವರು ಸಾಯುವುದೇ ಇಲ್ಲ ಎಂದು ಗೊತ್ತುಮಾಡಿದ್ದೆವು! ಅದು ಹೇಗೆ ಸತ್ತರು, ಸ್ವಾಮಿ? ಸಿಡಿಲು ಬಡಿದಹಾಗೆ!

ಕೆಂಚಣ್ಣ—ನಾಪಿಗೇನಪ್ಪಾ! ಹೇಳಿ ಕೇಳಿ ಬರುತ್ತದೇನು?

ರೈತ—ಹಾಗಲ್ಲ ಸ್ವಾಮಿ. ಅಷ್ಟು ಗಟ್ಟಿಮುಟ್ಟಾಗಿದ್ದವರು ಹಾಗೆ ಸಾಯುವು ದಂದರೇನು?

ಕೆಂಚಣ್ಣ—ನಮಗೆಲ್ಲ ಅದೇ ಸೋಜಿಗ! ಹೋಗಲಿ ನನ್ನ ಕತೆ ಬೇಡವೇನು, ನಿನಗೆ?

ರೈತ—ಹೇಳಿ, ಸ್ವಾಮಿ. ಸನ್ನೇಸಿಗಳು ಬರುವುದು ಇನ್ನೆಷ್ಟು ಹೊತ್ತೋ?

ಕೆಂಚಣ್ಣ—ಯಾರಿಗೂ ಹೇಳಬೇಡ. ಬಹಳ ದೊಡ್ಡ ಗುಟ್ಟು.

ರೈತ—ಹೇಳಿ, ಸ್ವಾಮಿ. ನಾನು ಯಾರಿಗೆ ಯಾತಕ್ಕೆ ಹೇಳಲಿ? ಅದರಲ್ಲಿಯೂ ನನ್ನ ತಲೆಯಲ್ಲಿ ಇದಕ್ಕೆಲ್ಲ ಹೆಚ್ಚಾಗಿ ಜಾಗವೇ ಇಲ್ಲ. ಮನೆಗೆ ಹೋಗು ವುದರೊಳಗೆ ಎಲ್ಲಾ ಮರೆತೇ ಹೋಗಿರುತ್ತದೆ.

ಕೆಂಚಣ್ಣ—ನಾನು ಮೊನ್ನೆ ಕಾವಲು ಕಾಯುತ್ತಿದ್ದಾಗ, ರಾತ್ರಿ ನಮ್ಮ ಬಾಳದೇ ಹೋದ ಮಹಾಸ್ವಾಮಿಯವರನ್ನು ಕಂಡೆ?

ರೈತ (ಹೆದರಿ)—ಏನೇನು?

ಕೆಂಚಣ್ಣ—ಗಾಬರಿ ಬೇಡ. ನಿಜವಾಗಿಯೂ ಕಂಡೆ. ಅದಕ್ಕೇ ಇಲ್ಲಿಗೆ ಬಂದಿದ್ದು ನಾನು, ಪ್ರಸಾದವೂ ವಿಭೂತಿ ತೆಗೆದುಕೊಂಡು ಹೋಗೋಣ ಎಂದು.

ರೈತ—ಓಹೋ ಸನ್ನೇಸಿಗಳು ಬಂದರು!

[ಸಂನ್ಯಾಸಿ ಬರುವನು. ದಾಂಡಿಗ ದೇಹ. ನೋಡಿದರೆ ಹುಲ್ಲು ತಿಂದು ಜೀವಿಸುವಂತೆ ಕಾಣುವುದಿಲ್ಲ. ಕೆಂಚಣ್ಣನೂ ರೈತನೂ ಎದ್ದು ದಂಡಪ್ರಣಾಮಮಾಡುವರು ಸಂನ್ಯಾಸಿ ಶಿವ! ಶಿವ! ಎಂದು ಆಶೀರ್ವದಿಸಿ, ಕುಶಾಸನದ ಮೇಲೆ ಕೂರುತ್ತಾನೆ.]

ಸಂನ್ಯಾಸಿ (ರೈತನನ್ನು ನೋಡಿ)—ಶಿವ, ನಿನಗೇನು ಬೇಕು?

ರೈತ—ಮನೆಯಲ್ಲಿ ಹೆಂಡತಿ ಮಕ್ಕಳಿಗೆ ಸ್ವಸ್ಥವಿಲ್ಲ. ನನಗೂ ಏನೋ ರೇಜಿಗೆ, ದೇವರೂ!

ಸಂನ್ಯಾಸಿ—ಎಲ್ಲಾ ತಿಳಿಯಿತು. (ಕರೆಯುವನು) ಬ್ರಹ್ಮಚಾರಿ! ಬ್ರಹ್ಮಚಾರಿ! (ಬ್ರಹ್ಮಚಾರಿ ಬರುತ್ತಾನೆ.) ಮಂತ್ರದರ್ಪಣ! (ಬ್ರಹ್ಮಚಾರಿ ಹೋಗುತ್ತಾನೆ.) ಶಿವ!

ಶಿವ! ಶಿವ! ಶಿವ! . . . (ಬ್ರಹ್ಮಚಾರಿ ದರ್ಪಣವನ್ನು ತಂದುಕೊಟ್ಟು ಹೋಗುವನು.) ಶಿವ, ಇಲ್ಲಿ ಬಾ. (ರೈತನು ಭಯದಿಂದ ಹತ್ತಿರ ಬರುವನು.) ತೆಗೆದುಕೋ. (ರೈತನು ಹಿಂದೆ ಮುಂದೆ ನೋಡಲು) ತೆಗೆದುಕೋ? (ಕನ್ನಡಿಯನ್ನು ನೀಡುವನು.)

ಕೆಂಚಣ್ಣ—ಹೆದರಬೇಡ, ತೆಗೆದುಕೋ, ರಂಗಣ್ಣ! (ರೈತ ತೆಗೆದುಕೊಳ್ಳುವನು.)

ಸಂನ್ಯಾಸಿ—ನೋಡು, ಆ ಕನ್ನಡಿಯಲ್ಲಿ! (ರೈತ ನೋಡುವನು.) ದೈತ್ಯನ ಮುಖ ಕಾಣುವುದಿಲ್ಲವೇ?

ರೈತ—ಇಲ್ಲ, ದೇವರೂ, ನನ್ನ ಮುಖ ಮಾತ್ರ ಕಾಣುತ್ತಿದೆ.

ಸಂನ್ಯಾಸಿ—ಅದೇ ದೈತ್ಯನ ಮುಖ ಕಾಣಯ್ಯಾ!

ರೈತ (ಹೆದರಿ)—ಆ್ಞ! ಆ್ಞ! ಆ್ಞ! (ಎಂದು ಮುಖವೆತ್ತುವನು.)

ಸಂನ್ಯಾಸಿ—ದೈತ್ಯನಿಗೆ ನಿನ್ನ ಮುಖದಂತೆ ಕಾಣಿಸಿಕೊಳ್ಳುವುದೊಂದು ಕಷ್ಟವೇ?

ಕೆಂಚಣ್ಣ—ಏನೂ ಕಷ್ಟವಿಲ್ಲ, ದೇವರೂ.

ಸಂನ್ಯಾಸಿ—ಇತ್ತಕೊಡು ಕನ್ನಡಿಯನ್ನು. (ರೈತನು ಕೊಡುವನು) ಆಗಲಿ, ಇವತ್ತು ಹೋಗು. ನಾಳೆ ಒಂದು ಖಂಡುಗ ಬತ್ತ, ದಕ್ಷಿಣೆ ತೆಗೆದುಕೊಂಡು ಬಾ.

ರೈತ (ಸ್ವಗತ)—ಹುಲ್ಲು ತಿಂದು ಜೀವಿಸುವವರಿಗೆ ಖಂಡುಗ ಬತ್ತವೇಕಪ್ಪಾ? (ಬಹಿರಂಗವಾಗಿ) ಆಗಲಿ, ದೇವರೂ. ಅಪ್ಪಣೆಕೊಟ್ಟರೆ ಹೋಗುತ್ತೇನೆ. (ಸಂನ್ಯಾಸಿ ತಲೆಯಲ್ಲಾಡಿಸಿ ಸಮ್ಮತಿಸಲು ಕೆಂಚಣ್ಣನಿಗೆ) ಕೆಂಚಣ್ಣಾ, ಬರುತ್ತೇನೆ.

ಕೆಂಚಣ್ಣ—ಒಳ್ಳೆಯದಯ್ಯಾ, ಹೋಗಿ ಬಾ. (ರೈತ ಹೋಗುತ್ತಾನೆ.)

ಸಂನ್ಯಾಸಿ—ನಿನ್ನದೇನು, ಕೆಂಚಣ್ಣಾ?

ಕೆಂಚಣ್ಣ—ಸ್ವಲ್ಪ ವಿಭೂತಿ ಬೇಕಿತ್ತು.

ಸಂನ್ಯಾಸಿ—ಏತಕ್ಕೆ?

ಕೆಂಚಣ್ಣ—ಗುಟ್ಟಿನ ವಿಷಯ, ದೇವರೂ. ಅದರಲ್ಲಿಯೂ ಅರಮನೆಯ ಸಹವಾಸ, ಕೆಟ್ಟದ್ದು. ನಿಮ್ಮ ದಿವ್ಯದೃಷ್ಟಿಗೆ ಗೊತ್ತಾಗದೆ?

ಸಂನ್ಯಾಸಿ—ಗೊತ್ತಾಗಿದೆ? ನೀನು ಕಂಡಿದ್ದು ನಿಜವಾಗಿಯೂ ಮಹಾರಾಜರ ಪ್ರೇತವೇ?

ಕೆಂಚಣ್ಣ—ಅಯ್ಯೋ, ಸ್ವಾಮಿ, ಗುಟ್ಟಾಗಿಟ್ಟಿರಬೇಕು.

ಸಂನ್ಯಾಸಿ—ಅದನ್ನೆಲ್ಲ ಕಟ್ಟಿಕೊಂಡು ನಮಗೆ ಆಗಬೇಕಾದುದೇನಯ್ಯಾ, ಸಂನ್ಯಾಸಿಗಳಿಗೆ? ಅದರಲ್ಲಿಯೂ ಇಲ್ಲಿ ಇನ್ನಾರೂ ಇಲ್ಲ. ನಾನು, ನೀನು, ಬ್ರಹ್ಮಚಾರಿ.

ಕೆಂಚಣ್ಣ (ಮೆಲ್ಲಗೆ)—ಹೌದು, ಶಿವ! ಸಾಕ್ಷಾತ್ ಮಹಾರಾಜರೇ ಕಾಣಿಸಿಕೊಂಡರು. ಮೊದಲನೆಯ ದಿನ ನಾನೊಬ್ಬನೇ ಇದ್ದೆ. ನಿನ್ನೆ ನಾನೂ ಹೊನ್ನಯ್ಯನವರೂ ಇಬ್ಬರೂ ಇದ್ದೆವು. ನಮ್ಮ ಹತ್ತಿರ ಮಾತಾಡಲೇ

ಇಲ್ಲ. ಇವತ್ತು ರಾಜಕುಮಾರರೂ ಬರುತ್ತಾರೆ. ಆದರೆ ಗುಟ್ಟಾಗಿದೆ. ಯಾರಿಗೂ ಗೊತ್ತಿಲ್ಲ, ಈ ಸುದ್ದಿ. (ಸಂನ್ಯಾಸಿ ಮುಗುಳ್ನಗುವನು.) ಅದಕ್ಕೇ ನನಗೆ ಸ್ವಲ್ಪ ವಿಭೂತಿ ಬೇಕು, ಸ್ವಾಮಿ.

ಸಂನ್ಯಾಸಿ (ಕೂಗಿ)—ಬ್ರಹ್ಮಚಾರಿ! ಬ್ರಹ್ಮಚಾರಿ!

ಬ್ರಹ್ಮಚಾರಿ (ಒಳಗಿನಿಂದ)—ಆಜ್ಞೆ!

ಸಂನ್ಯಾಸಿ—ಸ್ವಲ್ಪ ವಿಭೂತಿ ತೆಗೆದುಕೊಂಡು ಬಾ.

ಬ್ರಹ್ಮಚಾರಿ—ಬಂದೇ! (ಎಂದು ತಂದುಕೊಟ್ಟು ಹೋಗುವನು.)

ಸಂನ್ಯಾಸಿ—ಭಯಬೇಡ, ಕೆಂಚಣ್ಣ. ಇದನ್ನು ತೆಗೆದುಕೋ. (ವಿಭೂತಿ ಕೊಡುವನು.) ನಿನಗೆ ಯಾವ ಕಾಟವೂ ಮುಟ್ಟುವುದಿಲ್ಲ.

ಕೆಂಚಣ್ಣ—ದಯೆಯಿರಲಿ, ದೇವರೂ, ಬರುತ್ತೇನೆ. (ಎಂದು ಸಾಷ್ಟಾಂಗ ನಮಸ್ಕಾರ ಮಾಡಿ ವಿಭೂತಿ ಕಣ್ಣಿಗೆ ಒತ್ತಿಕೊಳ್ಳುವನು.)

ಸಂನ್ಯಾಸಿ—ಶಿವ! ಶಿವ! (ಆಶೀರ್ವದಿಸುವನು. ಕೆಂಚಣ್ಣ ನಿಷ್ಕ್ರಮಿಸುವನು.) ರಂಗದಾಸ್! ರಂಗದಾಸ್! (ಬ್ರಹ್ಮಚಾರಿ ಬರುವನು.) ನೀನು ಇಂದೇ ಶ್ರೀರಂಗಪಟ್ಟಣಕ್ಕೆ ಹೊರಡಬೇಕು. ಸಿದ್ಧನಾಗು. ಒಂದು ರಾಜಕಾರ್ಯ ಒದಗಿದೆ. ಹೈದರಾಲಿ ಯುವರು ಇಲ್ಲಿಗೆ ದಂಡೆತ್ತಿಬರಲು ಸುಸಮಯ ದೊರಕಿದೆ. ನಾನೊಂದು ಪತ್ರ ಬರೆದುಕೊಡುತ್ತೇನೆ.—ನಿನ್ನ ಕುದುರೆಯೆಲ್ಲಿ?

ಬ್ರಹ್ಮಚಾರಿ—ಆ ಸೆಟ್ಟಿಯ ಮನೆಯಲ್ಲಿದೆ.

ಸಂನ್ಯಾಸಿ—ಹೋಗಿ ಅದನ್ನು ಪ್ರಯಾಣಕ್ಕೆ ಸಜ್ಜುಗೊಳಿಸಿ ಬಾ. ಈ ರಾತ್ರಿಯೆ ಹೊರಡಬೇಕು. ಬಹುಶಃ ನೀನು ಶ್ರೀರಂಗಪಟ್ಟಣಕ್ಕೆ ಹೋಗುವ ಸಂದರ್ಭ ದೊರಕಲಾರದು. ಹೈದರಾಲಿಯುವರು ಜೈತ್ರಯಾತ್ರೆಯಲ್ಲಿದ್ದರೆ, ದಾರಿ ಯಲ್ಲಿಯೆ ಎಲ್ಲಿಯಾದರೂ ಸಿಕ್ಕಬಹುದು.

ಬ್ರಹ್ಮಚಾರಿ—ರಾಮರಾಯರ, ದೊರೆ ಕೊಲೆಯಾಗಿರುವನೇ?

ಸಂನ್ಯಾಸಿ—ಹಾಗಲ್ಲದೆ ಮತ್ತೇನು? ನೀನು ನಡೆ.—ತಿಮ್ಮಜಟ್ಟಿ ಬರುತ್ತಿದ್ದಾನೆ.

[ತಿಮ್ಮಜಟ್ಟಿ ಪ್ರವೇಶಿಸಿ ಸಾಷ್ಟಾಂಗ ಪ್ರಣಾಮಮಾಡಿ ಸಂನ್ಯಾಸಿಯ ಸನ್ನೆಯಂತೆ ಕೂತುಕೊಳ್ಳುವನು.]

ತಿಮ್ಮಜಟ್ಟಿ—ಗುರುಗಳೆ, ನಿನ್ನೆ ಚೆನ್ನಾಗಿ ನಿದ್ದೆ ಹತ್ತಿತು.

ಸಂನ್ಯಾಸಿ—ನಾನು ಹೇಳಿದ್ದೆನಲ್ಲವೆ?

ತಿಮ್ಮಜಟ್ಟಿ—ಆದರೆ ನಡುವೆ ಯಾರೋ ಬಂದು ಎದೆಯಮೇಲೆ ಕೂತುಕೊಂಡು ಕತ್ತು ಹಿಸುಗಿದಂತಾಯ್ತು! ನನಗೇಕೋ ಭಯವಾಗುತ್ತಿದೆ. ಪ್ರತಿ

ರಾತ್ರಿಯೂ ಹೀಗೆಯೇ ಏನಾದರೊಂದು ನಡೆಯುತ್ತಲೇ ಇದೆ. ತಾವು ಏನಾದರೂ ಒಂದು ಮಂತ್ರಕವಚ ಕೊಟ್ಟರೆ ಬದುಕಿಕೊಳ್ಳುತ್ತೇನೆ, ತಮ್ಮ ಹೆಸರು ಹೇಳಿಕೊಂಡು.

ಸಂನ್ಯಾಸಿ—ಅದಕ್ಕೇನು? ಕೊಡುತ್ತೇನಯ್ಯ. ನಾವಿರುವುದೇಕೆ? ಪರೋಪಕಾರ ಮಾಡಲಲ್ಲವೇ? ಆದರೆ ರೋಗದ ಗುಟ್ಟು ತಿಳಿಯದೆ ಮದ್ದು ಕೊಡುವುದು ತಪ್ಪು. ನಾಳೆ ಬಾ. ನಾನು ಕೇಳುವ ಪ್ರಶ್ನೆಗಳಿಗೆ ಮುಚ್ಚುಮರೆಯಿಲ್ಲದೆ ಉತ್ತರ ಹೇಳಬೇಕು. ಏನೂ ಸಂಕೋಚ ಬೇಡ ನಿನಗೆ. ಸಂನ್ಯಾಸಿಯ ಹತ್ತಿರ ಗುಟ್ಟೇನು? ವೈದ್ಯನೊಡನೆಯೂ ಗುರುವಿನೊಡನೆಯೂ ಗುಟ್ಟು ಮಾಡಿದರೆ ಕ್ಷೇಮಕರವಲ್ಲ.

ತಿಮ್ಮಜಟ್ಟಿ—ಆಗಲಿ, ದೇವರೂ. ನೀವು ನನಗೆ ವೈದ್ಯರೂ ಹೌದು, ಗುರುಗಳೂ ಹೌದು. ನಿಮ್ಮೊಡನೆ ನಾನು ಗುಟ್ಟು ಮಾಡುವುದಂದರೇನು? ಅಂತೂ ಹೇಗಾದರೂ ಮಾಡಿ ನನಗೆ ಹಿಡಿದಿರುವ ಶನಿ ಬಿಡಿಸಿದರೆ ಅಷ್ಟೇ ಸಾಕು.

ಸಂನ್ಯಾಸಿ—ನಿನಗೊಬ್ಬನಿಗೇ ಅಲ್ಲ; ಎಲ್ಲರಿಗೂ ಶನಿ ಹಿಡಿದಿದೆ ಈ ಊರಿನಲ್ಲಿ. ಈಗತಾನೆ ಆ ಕೆಂಚಣ್ಣನೂ ಬಂದಿದ್ದ. ವಿಭೂತಿ ಕೊಟ್ಟು ಕಳಿಸಿದೆ.

ತಿಮ್ಮಜಟ್ಟಿ—ಅವನಿಗೆ ಏನಾಗಿದೆಯಂತೆ?

ಸಂನ್ಯಾಸಿ—ಅವನಿಗೂ ಶನಿಯ ಕಾಟ. ನಿನ್ನೆ ರಾತ್ರಿ ತೀರಿಹೋದ ಮಹಾರಾಜರು ಕಾಣಿಸಿಕೊಂಡರಂತೆ.

ತಿಮ್ಮಜಟ್ಟಿ (ಬೆಚ್ಚಿಬಿದ್ದು)—ಆ್ಞ! ಎಲ್ಲಿ? ಏನು? ಅಯ್ಯೋ—

ಸಂನ್ಯಾಸಿ—ನನಗದೆಲ್ಲ ತಿಳಿಯದು. ಇವತ್ತು ರಾತ್ರಿ ರಾಜಕುಮಾರನೂ ಕೂಡ ಹೋಗುತ್ತಾನಂತೆ ಅದನ್ನು ಪರೀಕ್ಷಿಸಲು.

ತಿಮ್ಮಜಟ್ಟಿ (ಕೈಮುಗಿದುಕೊಂಡು)—ನಾನು ಕೆಟ್ಟೆ, ಮಹಾಸ್ವಾಮಿ. ನನ್ನನ್ನು ಕಾಪಾಡಬೇಕು!

ಸಂನ್ಯಾಸಿ—ಶಿವನಿದ್ದಾನೆ!

ತಿಮ್ಮಜಟ್ಟಿ—ನನಗೆ ನೀವೇ ಶಿವ! ಕಾಪಾಡಬೇಕು!

ಸಂನ್ಯಾಸಿ—ಮನೆಗೆ ಹೋಗಿ ಶಿವಪೂಜೆ ಮಾಡು. ಇವತ್ತು ಎಲ್ಲಿಗೂ ಹೋಗಬೇಡ. ನಾಳೆ ಇಲ್ಲಿಗೆ ಬಾ.

ತಿಮ್ಮಜಟ್ಟಿ—ಅಪ್ಪಣೆ! (ದಂಡಪ್ರಣಾಮ ಮಾಡಿ ಹೋಗುವನು.)

ಸಂನ್ಯಾಸಿ—ಇದೀಗ ಸುಸಮಯ ಹೈದರಾಲಿಯವರಿಗೆ! ಈಗಳೆ ಬರೆಯುತ್ತೇನೆ.

(ಹೋಗುವನು.)

[ಪರದೆ ಬೀಳುವುದು.]

## ದೃಶ್ಯ ೫

[ಲಿಂಗಣ್ಣ ಮಂತ್ರಿಯ ಮನೆಯ ಒಂದು ಭಾಗ. ಲಿಂಗಣ್ಣ, ಬಸವಯ್ಯ, ರುದ್ರಾಂಬೆ ಬರುವರು. ರುದ್ರಾಂಬೆ ಸುಮಾರು ಹದಿನಾರು ವರ್ಷ ವಯಸ್ಸಿನ ತರುಣಿ. ಚೆಲುವೆಯಾದರೂ ಆಕೆಯ ಅಂಗವಿನ್ಯಾಸದಲ್ಲಿ ದುರ್ಬಲತೆಯ ಚಿಹ್ನೆಯಿಲ್ಲ. ಕೋಮಲೆಯಾದರೂ ಸಬಲೆಯಂತೆ ತೋರು ತ್ತಾಳೆ ಸ್ತ್ರೀ ಸಹಜವಾದ ಆಕೆಯ ಸೌಂದರ್ಯದ ಅಂತರಾಳದಲ್ಲಿ ಸಮಯ ಬಂದರೆ ಹೊರ ಹೊಮ್ಮಲು ಅನುವಾಗಿರುವ ಪೌರುಷಯುಕ್ತವಾಗಿರುವ ರೌದ್ರವಿರುವಂತೆ ತೋರುತ್ತಿದೆ. ಬಹು ದೂರದ ಮಿಂಚಿನಂತೆ ಮನೋಹರವಾಗಿದ್ದಾಳೆ. ಆಕೆಯ ಸುಕೋಮಲ ಮಧುರವಾಣಿಯಲ್ಲಿ ದಿಟ್ಟತನದ ಕುರುಹು ತೋರುವುದು ]

ಲಿಂಗಣ್ಣ—ಕುಳಿತುಕೋ, ಬಸವಯ್ಯ. (ರುದ್ರಾಂಬೆಗೆ) ರುದ್ರಾ, ನಿನ್ನಿನಿಯನಿಗೆ ಮನಸು ತಲ್ಲಣಗೊಂಡಿದೆ. ನೀನಾತನನು ಸಂತವಿಸಬಲ್ಲೆ ಎಂದು ಇಲ್ಲಿಗೆ ಕರೆತಂದಿದ್ದೇನೆ. ನಿನ್ನ ಪ್ರೇಮಮಯ ಸುಂದರ ಸಾನ್ನಿಧ್ಯದಲ್ಲಿ ಆತನಿಗೆ ಶಾಂತಿ ಲಭಿಸಬಹುದು. (ಕುಳಿತುಕೊಂಡಿರುವ ಬಸವಯ್ಯನಿಗೆ) ರಾಜಕುಮಾರ, ನಾನೀಗಲೆ ಬರುತ್ತೇನೆ. ರುದ್ರಾ ನಿನ್ನೊಡನೆ ಮಾತಾಡುತ್ತಿರಲಿ. (ಲಿಂಗಣ್ಣ ಹೋಗುವನು )

ರುದ್ರಾಂಬೆ—ರಾಜಕುಮಾರ,

ದುಃಖಭಾರದೊಳೆನ್ನ ಮರೆತಂತೆ ತೋರುತಿದೆ.
ನಿನ್ನಳಲಿನೊಳು ನಾನೂ ಭಾಗಿಯಾಗಲು ನನಗೆ
ಪುಣ್ಯವಿಲ್ಲವೊ ಏನೊ ? ತಂದೆಗಳ ಮರಣದಲಿ
ನೀನು ಹಗಲೂ ಇರುಳೂ ಖಿನ್ನನಾಗಿಹೆ ಎಂದು
ಕೇಳಿ ಮರುಗುತ್ತಿದ್ದೆ. ಇಂದು ನಿನ್ನನು ನೋಡ
ಬೇಕೆಂಬ ಆಕಾಂಕ್ಷೆ ಸಿದ್ಧಿಸಿತು. ಧನ್ಯಳಾದೆ !
ನಿನ್ನ ದುಗುಡದೊಳಿನಿತನಾದರೂ ನಾಂ ಪೊತ್ತು
ಧನ್ಯಳಾಗುವ ತೆರದೆ ಕೃಪೆಮಾಡು.

ಬಸವಯ್ಯ— ರುದ್ರಾಂಬೆ,

ನನ್ನ ದುಗುಡದ ಹೊರೆಯು ನಿನ್ನ ಮೇಲೆಯೂ ಹೇರಿ
ಶರದದ ಮುಗಿಲಿನಂತೆ ಶುಭ್ರವೂ ಹಗುರವೂ
ಆಗಿ ಆಕಾಶದಲಿ ನಲ್ಮೆಯಿಂ ತೇಲುತಿಹ
ನಿನ್ನೆದೆಯನೇತಕ್ಕೆ ಕಾರಮುಗಿಲನ್ನಾಗಿ
ಮಾಡಲಿ ?

ರುದ್ರಾಂಬೆ— ಹಾಗೆನ್ನದಿರು, ಇನಿಯ. ಸುಖದಲ್ಲಿ
ಅರೆಪಾಲನೆಳಸುತಿಹ ನಾನು ನಿನ್ನಳಲಿನಲಿ
ಅರೆಪಾಲನಾನಂದದಿಂದೇ ಬಯಸುತಿಹೆನು.
ಲೋಕದಲಿ ಪ್ರೇಮವಾದರೂ ಇರುವುದೇತಕ್ಕೆ ?
ನೊಂದೆದೆಯ ಸಂತೈಸಲಲ್ಲವೇ ? ಜೀವನದ
ಕೋಟಲೆಯ ಭಾರವನು ಪರಿಹರಿಸಲಲ್ಲವೇ ?

ಬಸವಯ್ಯ—ನೀನಾ ಕಾರ್ಯವನು ಮಾಡುತ್ತಲೇ ಇರುವೆ.
ನಿನ್ನ ಸೌಂದರ್ಯವೂ, ನಿನ್ನ ಮಾಧುರ್ಯವೂ,
ನಿನ್ನ ನಲ್ಮೆಯ ನೆನವೂ ನನ್ನನಿದುವರೆಗಂತು
ಪೊರೆದಿಹವು. ನನಗೆ ನೀನೊಬ್ಬಳೇ ಶಾಶ್ವತ
ಧ್ರುವತಾರೆ! ತಿಮಿರ ಪರಿವೃತವಾದ, ಸರ್ವದಾ
ಸಮ್ಮಥಿತವಾದ ಈ ಸಂಸಾರಶರಧಿಯಲಿ
ಮೊರೆಮೊರೆದು ನೊರೆಗರೆವ ಪೆರ್ದೆರೆಗಳಗ್ರದಲಿ
ಬಿದ್ದೆದ್ದು ತೇಲುತಿಹ ಬಾಳಕಿರುದೋಣಿಯಲಿ
ಕುಳಿತು ಕಾತರನಾದ ನನಗೆ ನೀನೇ ಒಂದು
ಶಾಶ್ವತ ಧ್ರುವತಾರೆ! ನೀನೆನ್ನ ಬಳಿಯಿರಲು
ಬಾಳೆಲ್ಲ ಹಗುರವಾದಂತಾಗಿ ಶಾಂತಿ
ಮೂಡುವುದು ಮನದಲ್ಲಿ.—ನಿಂತಿರುವೆಯೇಕೆ ?
ಬಾ, ಇಲ್ಲಿ ಕುಳಿತುಕೋ ! (ಪಕ್ಕಕ್ಕೆ ಕೈತೋರುವನು.)

ರುದ್ರಾಂಬೆ (ಮೆಲ್ಲಗೆ ಬಳಿ ಬಂದು ನಿಂತು)—ಹಾಗಾದರಾನಿಂದು
ಧನ್ಯಳೆಂದೇ ತಿಳಿದೆ!—ಪ್ರಿಯನೇ, ಇನ್ನೆನಿತು
ದಿನ ಇಂತು ಕೊರಗುವುದು ತಂದೆಗಳ ನಿಧನಕ್ಕೆ ?

ಬಸವಯ್ಯ (ಸುಯ್ದು)—ಪಿತನ ನಿಧನಕ್ಕಾಗಿ ನಾನಿಂತು ಕೊರಗುತಿಲ್ಲ.

ರುದ್ರಾಂಬೆ—ಮತ್ತೇನು ?

ಬಸವಯ್ಯ (ವ್ಯಸನದಿಂದ)—ಏನೆಂದು ಹೇಳಲಿ, ರುದ್ರಾಂಬೆ ?—
ನಿಂತುಕೊಂಡಿಹುದೇಕೆ ? ಬಾ, ಕುಳಿತುಕೋ.—

(ಆಕೆಯ ಕೈಹಿಡಿದು ಪಕ್ಕದಲ್ಲಿ ಕೂತುಕೊಳ್ಳುವಂತೆ ಮಾಡಿ)

ಏನೆಂದು ಹೇಳಲಿ ? ಹೇಳೆ ನಂಬುವರಾರು ?

ರುದ್ರಾಂಬೆ—ಇನಿಯ, ನಾಂ ಬಲ್ಲೆ. ನನ್ನ ಪಿತನರುಹಿದನು.
ಆದರಾ ಸಂಶಯಕೆ ಕಾಲಿಲ್ಲವೆಂದೆನ್ನ
ಭಾವನೆ.

ಬಸವಯ್ಯ— ಚೇಳಿಗೆ ಕಾಲೇಕೆ, ರುದ್ರಾ ?
ಕೊಂಡಿಯೊಂದೇ ಸಾಕು !

ರುದ್ರಾಂಬೆ— ಕ್ಷಮಿಸು, ರಾಜಪುತ್ರಾ ;
ಚೆಲುವಾಂಬೆಯೆದೆಯಲ್ಲಿ ಚೇಳುಗಳಿಗೆಡೆಯಿಲ್ಲ.

ಬಸವಯ್ಯ—ಓ ನಲ್ಲೆ, ನೀನೇನು ಬಲ್ಲೆ ? ಚೇಳ್ಗಳಿರವು
ಕಡಿಸಿಕೊಂಡವಗಲ್ಲದೆ ಇತರರಿಗೆ ತಿಳಿಯುವುದೆ ?
ತಂದೆಯಳಿದಿನ್ನೂ ವಾರಗಳೂ ಕಳೆದಿಲ್ಲ ;
ಸಿಂಗಯ್ಯನೊಡನೆ ಸರಸವಾಡುತ್ತಿಹಳು !

ರುದ್ರಾಂಬೆ—ಆಕೆಯತ್ತುದನು ನಾನೆ ಕಂಡಿಹೆನು !

ಬಸವಯ್ಯ— ಶಿವ ಶಿವಾ !
ಎಲ್ಲ ಹುಸಿಗಂಬನಿಗಳಲ್ತೆ ? ರುದ್ರಾಂಬೆ,
ಕಣ್ಣೀರ್ಗಳಾಳದಲಿ ನಾಕವಿರಬಹುದು,
ನರಕವಿರಬಹುದು ; ಹರುಷವಿರಬಹುದು,
ಶೋಕವಿರಬಹುದು. ಕೈತವಕೆ ಕಂಬನಿಯೆ
ಮುಸುಗಾಗಬಹುದು. ಚೆಲುವಾಂಬೆಯಶ್ರುಗಳ
ಹೃದಯದಲಿ ಮೊಸಳೆಗಳ ಮಡುವಿಹುದ ನಾಂ ಬಲ್ಲೆ.

ರುದ್ರಾಂಬೆ—ಕಾರಣವನರಿಯದೆಯೆ ದೋಷವನು ಹೇಳುವುದೆ ?

ಬಸವಯ್ಯ—ಇಂದಿನಿರುಳೆಲ್ಲವನು ಮನಗಾಣುವೆನು !

ರುದ್ರಾಂಬೆ— ಅದೆಂತು ?

ಬಸವಯ್ಯ—ತಂದೆಯನು ಕಂಡು ಮಾತಾಡುವೆನು !

ರುದ್ರಾಂಬೆ (ಬೆಕ್ಕಸದಿಂದೆ)— ಏನೇನು

ಬಸವಯ್ಯ—ತಂದೆಯನು ಕಂಡು ಮಾತಾಡುವೆನು ! ಬೆಚ್ಚದಿರು.
ಮೊನ್ನೆ ಕಾವಲುಗಾರ ಕಂಚಣ್ಣನಿರುಳಲ್ಲಿ
ನನ್ನ ತಂದೆಯ ರೂಪವನು ಕಂಡನಂತೆ !
ನಿನ್ನೆ ಹೊನ್ನಯ್ಯನೂ ಅವನ ಜೊತೆಯೊಳೆ ಹೋಗಿ
ಕಂಡೆನೆಂದುಸುರಿದನು. ಮಾತಾಡಲಿಲ್ಲಂತೆ.

ಇಂದು ನಾನೂ ಅವರನೊಡಗೊಂಡು ನಡೆದು
ತಂದೆಯಂತೆಯೆ ಕಂಡುಬಂದರದು ನುಡಿಸುವೆನು.

ರುದ್ರಾಂಬೆ—ಇದು ದಿಟವೆ ?

ಬಸವಯ್ಯ— ಹೊನ್ನಯ್ಯನೇನು ಸುಳ್ಳಾಡುವನೆ ?

ರುದ್ರಾಂಬೆ—ಇನಿಯ, ನಿನ್ನೂಹೆ ದಿಟಮಪ್ಪ ಪಕ್ಷದಲಿ
ನಿನ್ನ ಸಾಹಸವೆಲ್ಲವೂ ಸನ್ನದಾಗುವುದು !

ಬಸವಯ್ಯ—ಇದನು ಯಾರೊಡನೆಯೂ ಹೇಳದಿರು.—ಎಲ್ಲಿ ?
ಲಿಂಗಣ್ಣ ಮಂತ್ರಿಗಳು ?

ರುದ್ರಾಂಬೆ— ನೋಡಿ ಬರುತ್ತೇನೆ. (ಹೋಗುವಳು.)

ಬಸವಯ್ಯ—ಓ ಚೆಲುವೆ, ನೀನೆನ್ನ ಬಳಿಗೆ ಬರೆ ನನಗೆನಿತು
ಸೊಗಸುಹುದು ! ಬದಿಯ ಬಯಕೆಯ ಮೊದಲ ಕಿಡಿ ನೀನು !
ಬಿರಿಯುವಲರಂತೆ, ಸುಳಿಸುಳಿವ ತೆಂಬೆಲರಂತೆ,
ಮಿರುಪ ಹೊಂಬಿಸಿಲಲ್ಲಿ ನಲಿವ ಕೆಂದಳಿರಂತೆ,
ಬಿರಿಮುಗುಳ ಮುಡಿದಿರುವ ಮಲ್ಲಿಗೆಯ ಹೂದರಂತೆ,
ಹೊಸ ಮುಗಿಲಿನಲಿ ನಲಿವ ಕಾಮನ ಬಿಲ್ಲಿನಂತೆ,
ನೊರೆಯ ನೀಸೆಯ ಚೆಲ್ಲಿ ಬಿಂಕದಿಂ ಪರಿಯುತಿಹ
ತೊರೆಯಂತೆ, ಮುಂಬೆಳಗಿನೈಸಿರಿಯ ಮುಗುಳ್ನಗೆಯಂತೆ
ಮೆರೆಯುತಿಹೆ, ಓ ನಲ್ಲೆ, ಚೈತ್ರದಾಗಮನದಲಿ
ನಳನಳಿಸಿ ನಲಿವ ಬನಮಾಲೆಯಂತೆ !
ನೀನೆನಗೆ ಚೈತನ್ಯದಾತೆ ! ನೀನೆನಗೆ
ಜೀವರಸವಾಹಿನಿ ! ಬಾಳ ಮರುಭೂಮಿಯಲಿ
ನೀನೆನಗೆ ಮರುವನ ! ರುದ್ರಾಂಬೆ ! ರುದ್ರಾಂಬೆ !

(ರುದ್ರಾಂಬೆ ಹೋದೆಡೆಗೇ ನೋಡುತ್ತ ಕಣ್ಣೊರಸಿಕೊಳ್ಳುತ್ತಾನೆ.)

[ಪರದೆ ಬೀಳುವುದು.]

———

# ಅಂಕ ಎರಡು

## ದೃಶ್ಯ ೧

[ಅರಮನೆಯ ಹೆಬ್ಬಾಗಿಲ ಬಳಿ. ನಡುರಾತ್ರಿ—ಕೆಂಚಣ್ಣ, ಹೊನ್ನಯ್ಯ, ಬಸವಯ್ಯ ಪ್ರವೇಶಿಸುವರು.]

ಬಸವಯ್ಯ—ಏನು ಮೌನ, ಏನು ಶಾಂತಿ, ಈ ಪ್ರಕೃತಿರಂಗದಲಿ!

ಹೊನ್ನಯ್ಯ—ಆದರೂ ಭಯಂಕರ.

ಬಸವಯ್ಯ—ಹೌದು, ಮಹತ್ತಾದುದೆಲ್ಲ ಭವ್ಯವಾಗಿರುತ್ತದೆ. ಭಯವೆಂಬುದು ನಮ್ಮ ಸ್ವಾರ್ಥತೆಯ ದೃಷ್ಟಿಗೆ ಮಾತ್ರ. ನೋಡು, ಹೊನ್ನಯ್ಯ, ಈ ಬೆಳ್ದಿಂಗಳ ಮಾಯೆ ಎಷ್ಟು ಮನೋಹರವಾಗಿದೆ. ಈ ಸೌಂದರ್ಯಪೂರದಲಿ ನನ್ನೆದೆಯ ಕೋಟಲೆಯೆಲ್ಲ ಹಗುರವಾದಂತಾಗಿ ತೇಲುತಿದೆ. ನಾವ್ಯೆತಂದ ಕಜ್ಜವೇ ವಿಸ್ಮೃತಿಯನ್ನೈದುತಿದೆ.—ಈಗ ಹೊತ್ತು ಎಷ್ಟಿರಬಹುದು?

ಕೆಂಚಣ್ಣ—ನಡುರಾತ್ರಿ ಕಳೆದಿದೆ, ಸ್ವಾಮಿ. ಇನ್ನೇನು ಅದು ಬರುವ ಸಮಯ.

ಬಸವಯ್ಯ—ಹೊನ್ನಯ್ಯ, ನಾನೊಬ್ಬ ಸಾಮಾನ್ಯ ಮಾನವನಾಗಿ ಹುಟ್ಟಬಾರದಾಗಿತ್ತೆ?

ಹೊನ್ನಯ್ಯ—ಸಾಮಾನ್ಯರು ಈ ರೀತಿ ಆಲೋಚಿಸುವುದಿಲ್ಲ, ನಿನಗೀಗ ಕೊರತೆಯೇನು?

ಬಸವಯ್ಯ—ನೋಡಿದೋ, ಎಂತಹ ಶಾಂತಿ ಕಡಲಾಡುತಿದೆ!

ಎಂತಹ ಸೊಬಗು ಸೂರೆಯಾಗಿಹುದು ಈ ನಮ್ಮ
ತಿರೆಯಲ್ಲಿ! ಈ ಪ್ರಕೃತಿ ಸೌಂದರ್ಯವೆಮ್ಮನು
ಕೈಬೀಸಿ ಕರೆಯುತಿದೆ ಉತ್ತಮ ಪ್ರಪಂಚಕ್ಕೆ.
ಈ ಸೊಬಗನೀಕ್ಷಿಸಲು, ಈ ಶಾಂತಿಯನು ಸವಿಯೆ,
ಈ ಪ್ರಕೃತಿಯಮರವಾಣಿಯು ಕರೆಯನಾಲಿಸಲು,
ದೊರೆತನದ ದೂಳ್ಮುಸುಕಿದಕ್ಷಿಗಳಿಂದಾಗದು;
ಹೆಮ್ಮೆಯಿಂ ರುಚಿಗೆಟ್ಟ ಎದೆಗೆ ಶಾಂತಿಯು ಸಿಗದು;
ಸಿರಿಬೊಬ್ಬೆ ತುಂಬಿರುವ ಕರ್ಣಗಳಿಗಾ ವಾಣಿ
ಕೇಳಿಸದು!—ಹೊತ್ತಿಲ್ಲ; ನಮಗೆ ಪುರಸತ್ತಿಲ್ಲ!
ಬಳಸಂಚುಗಳ ಹೂಡಲೆಮಗಿಹುದು ಹೊತ್ತು;

ಪರರ ಛಿದ್ರವನರಸಲೆಮಗಿಹುದು ಬೇಕಾದ
ಪುರಸತ್ತು! ಸೊಬಗನಾಸ್ವಾದಿಸಲು ಹೊತ್ತಿಲ್ಲ!
ಗಗನದ ಅನಂತತೆಯನೀಕ್ಷಿಸುತೆ ವಿಸ್ಮಯರೆಯೆ
ಹೊತ್ತಿಲ್ಲ! ಬನದ ಹೂವನು ನೋಡಿ ಬಣ್ಣಿಸಲು
ನಮಗೆ ತೆರಪಿಲ್ಲ! ಹಕ್ಕಿ ಹಾಡಲು ನಿಂತು
ಆಲಿಸಲು ಹೊತ್ತಿಲ್ಲ!—ಮರ್ತ್ಯದಲ್ಲಿಹ ಮಧುರ
ಸ್ವರ್ಗ ಬಿಂದುಗಳಲ್ತೆ ಸೌಂದರ್ಯ ಸ್ಥಾನಗಳು?
ಸತ್ತಮೇಲೆಮಗೆ ಸಿಗಬಹುದು ಪುರಸತ್ತು
ಆದರೀ ಚೆಲ್ವು ಸಿಗುವುದೆ? ಯಾವನಿಗೆ ಗೊತ್ತು?

**ಕೆಂಚಣ್ಣ**—ಅಲ್ಲಿ ನೋಡಿ! ಬರುತ್ತಿದೆ! ಶಿವ! ಶಿವ! ಶಿವ! . . .
ಹೊನ್ನಯ್ಯ—ನೋಡಲ್ಲ, ಬಸವಯ್ಯ, ನೋಡಲ್ಲಿ!
ಬಸವಯ್ಯ—ನನ್ನ ತಂದೆಯೆ ಹೌದು! ಶಿವಶಿವಾ!

[ಭೂತ ದೂರದಲ್ಲಿ ಪ್ರವೇಶಿಸುತ್ತದೆ.]

**ಹೊನ್ನಯ್ಯ**—ಮಾತಾಡಿಸು! ಮಾತಾಡಿಸು!
**ಬಸವಯ್ಯ**—ಶಿವಶಿವಾ ಕಾಪಾಡು!
ದೆವ್ವವೋ? ದೇವತೆಯೊ? ಯಾರಾದರಾಗಿರು!
ಶುಭವು ನಿನ್ನುದ್ದೇಶವೋ? ಅಶುಭವುದ್ದೇಶವೊ?
ನಾನರಿಯೆ! ಆಕಾರದಲಿ ನೀನು ನನ್ನ
ತಂದೆಯನೆ ಹೋಲುತಿಹೆ. ಅದರಿಂದೆ ನುಡಿಸುವೆ:
ಬಸವೇಂದ್ರ ಭೂಮಿಪನೆ, ಓ ತಂದೆ, ಓ ದೊರೆಯೆ,
ಬಿದನೂರನಾಳಿದ ಸ್ವಾಮಿಯೇ, ಬೇಡುವೆನು;
ಪಡಿನುಡಿಯನಿತ್ತೆನ್ನ ಮನದ ಸಂದೇಹವನು
ಪರಿಹರಿಸು. ಪುಣ್ಯಾತ್ಮನಾದ ನೀನಿಂತೇಕೆ
ದಿಕ್ಕಿರದೆ ಮಡಿದವನ ಆತ್ಮದಂದದಲಿ
ಪ್ರೇತರೂಪದಿ ರಾತ್ರಿಯನು ಸುತ್ತುತಿರುವೆ?
ಇದರರ್ಥವೇನರುಹು! ದುಃಖದಿಂದೆನ್ನೆದೆಯು
ಸಿಡಿಯುತಿದೆ. ಓ ನನ್ನ ತಂದೆಯೇ, ಮಾತಾಡು!
ನೀನೆನ್ನ ತಂದೆಯೇ ದಿಟವಾದರೆನಗೆ ನುಡಿ!
ಏಕಿಂತು ತೊಳಲುತಿಹೆ? ಬಯಕೆಯೇನಿಹುದಿಲ್ಲಿ?

ನಿನಗಾವ ರೀತಿಯಲಿ ನಾನು ನೆರವಾಗಬಲ್ಲೆ ?
ಹೇಳು ! ನುಡಿ ! ಮಾತಾಡು ! . . .

(ಭೂತ ಸನ್ನೆ ಮಾಡುವುದು.)

ಕೆಂಚಣ್ಣ—ಅಯ್ಯೋ, ಕೈ ಬೀಸಿ ಕರೆಯುತ್ತಿದೆ !

ಹೊನ್ನಯ್ಯ—ಆವ ಗುಟ್ಟನೋ ನಿನಗೊಬ್ಬನಿಗೇ ಹೇಳುವಂತೆ !

ಕೆಂಚಣ್ಣ—ಅಯ್ಯೋ, ಹೋಗಬೇಡಿ, ಸ್ವಾಮಿ !

ಹೊನ್ನಯ್ಯ—ಹೋಗುವುದೆಂದರೇನು ? ಹುಡುಗಾಟವೇ !

ಬಸವಯ್ಯ—ಇಲ್ಲಿ ಮಾತಾಡಲದಕೆ ಸಂಕೋಚವೆಂದು ತೋರುತಿದೆ. ಅದರೊಡನೆ ಹೋಗುವೆನು.

ಹೊನ್ನಯ್ಯ—ಅದಾಗದು, ಬಸವಯ್ಯ ! ನಿನಗೇನು ಮರುಳಾಟವೇ ?

ಕೆಂಚಣ್ಣ—ದಮ್ಮಯ್ಯ ! ಖಂಡಿತ ಹೋಗುವುದು ಬೇಡ !

ಬಸವಯ್ಯ—ಭಯವೇಕೆ, ಹೊನ್ನಯ್ಯ ? ನನ್ನ ಜೀವನವೊ
ನನಗೆ ತೃಣಕಿಂತ ಕಡೆ ! ನನ್ನಾತ್ಮ ? ಅದನೇನು
ಮಾಡಬಲ್ಲುದು ? ಅಮರವಾದುದದು ! ನೋಡದೋ,
ಮರಳಿ ಕೈ ಬೀಸುತಿದೆ ! ಹೋಗಿಯೇ ಹೋಗುವೆನು !

ಕೆಂಚಣ್ಣ—ಸ್ವಾಮಿ, ನಿಮ್ಮನ್ನೆಲ್ಲಿಯಾದರೂ ಕೆರೆಗೋ ಬಾವಿಗೋ ಹಾರಿಸಿಬಿಡುತ್ತದೆ ! ಹೋಗಬೇಡಿ, ನಿಮ್ಮ ದಮ್ಮಯ್ಯ !

ಹೊನ್ನಯ್ಯ (ಬಸವಯ್ಯನ ಕೈ ಹಿಡಿದು)—
ಸತ್ಯವೋ ಕಪಟವೋ ನೀನರಿಯೆ ಬಸವಯ್ಯ.
ಎಲ್ಲಿಯಾದರೂ ನಿನ್ನನೆಳದೊಯ್ದು ಕಿಬ್ಬಿಯಲಿ
ತಳ್ಳಿದರೆ ! ಅಥವಾ ರುದ್ರಾಕೃತಿಯನಾಂತು
ನಿನ್ನ ಮಿದುಳನೆ ಕದಡಿ ಹುಚ್ಚು ಹಿಡಿಸಿದರೆ !

ಬಸವಯ್ಯ—ಕರೆಯುತಿದೆ ! ಕೈ ಬಿಡು !

ಹೊನ್ನಯ್ಯ—ನಾನು ಬಿಡೆ ! ನೀನು ಹೋಗಕೂಡದು !

ಕೆಂಚಣ್ಣ—ಅಯ್ಯೋ, ನಿಮ್ಮ ದಮ್ಮಯ್ಯ !

ಬಸವಯ್ಯ (ಅಧಿಕಾರ ಯುಕ್ತ ವಾಣಿಯಿಂದ)—ಬಿಡು ಕೈಯ, ಹೊನ್ನಯ್ಯ !

(ಕೊಡಹುವನು.)

ಹೊನ್ನಯ್ಯ—ಇಲ್ಲ ; ನಮ್ಮ ಸ್ನೇಹದಾಣೆ ! ನೀನು ಹೋಗಲಾರೆ !

ಬಸವಯ್ಯ—ಅಯ್ಯೋ, ನನ್ನ ನೆತ್ತರು ಕೇಸರಿಯಂತೆ ಕೆರಳಿದೆ !—ಆ !—ಇನ್ನೂ ಸನ್ನೆ ಮಾಡಿ ಕರೆಯುತ್ತಲೇ ಇದೆ !—ಕೈಬಿಡು, ಹೊನ್ನಯ್ಯ ! (ಹೋರಾಡಿ ಬಿಡಿಸಿ

ಕೊಂಡು) ತಡೆದರೆನ್ನನು ನಿಮಗೂ ಅದುವೆ ಗತಿಯಾಗುವುದು. (ಭೂತಕ್ಕೆ) ನಡೆ, ಬರುತ್ತೇನೆ! (ಭೂತದೊಡನೆ ಹೋಗುವನು.)

ಹೊನ್ನಯ್ಯ—ಅವನಿಗೇನೋ ಹುಚ್ಚು ಕೆರಳಿದೆ!

ಕೆಂಚಣ್ಣ—ನಾವೂ ಹೋಗೋಣ ಅವರ ಹಿಂದೆಯೇ. ಈಗ ಅವರ ಮಾತು ಕೇಳಬಾರದು.

ಹೊನ್ನಯ್ಯ—ಆಗಲಿ, ಬಾ. ಏನಾಗುವುದೋ ನಾನು ಬೇರೆ ಕಾಣೆ!

ಕೆಂಚಣ್ಣ—ನಮ್ಮ ನಾಡಿಗೇನೋ ಕೇಡುಗಾಲ ಬಂದಿದೆ, ಸ್ವಾಮಿ.

ಹೊನ್ನಯ್ಯ—ಶಿವಾ, ಅಮಂಗಳವಾಗದಿರಲಿ!

ಕೆಂಚಣ್ಣ—ಬನ್ನಿ! ಬನ್ನಿ! ಹೊತ್ತಾಯ್ತು! (ಹೋಗುವರು.)

[ಪರದೆ ಬೀಳುವದು.]

## ದೃಶ್ಯ ೨

[ನಿಂಬಯ್ಯನ ಮನೆಯಲ್ಲಿ ಒಂದು ಕೊಟಡಿ. ಸೋಮಯ್ಯ, ಶಿವಯ್ಯ ಮಾತಾಡುತ್ತಿರುವರು. ಶಿವಯ್ಯ ಸೋಮಯ್ಯನಿಗಿಂತಲೂ ಸ್ವಲ್ಪ ಹಿರಿಯುವನು. ತೆಳ್ಳಗೆ ಬಲವಾಗಿರುವ ವ್ಯಕ್ತಿ. ಬಾಹ್ಯದಿಂದ ಆತನ ಆಂತರ್ಯವನ್ನು ನಿಷ್ಕರ್ಷಿಸಲಾಗುವಂತಿಲ್ಲ.]

ಶಿವಯ್ಯ—ನಿನ್ನಿಂದ ನನಗೊಂದು ಮಹದುಪಕಾರವಾಗಬೇಕಾಗಿದೆ.

ಸೋಮಯ್ಯ—ಅದೇನು ನನ್ನಿಂದಾಗುವ ಉಪಕಾರ?

ಶಿವಯ್ಯ—ನೀನು ನೆರವಾಗಲೊಪ್ಪಿದರೆ ಹೇಳುತ್ತೇನೆ.

ಸೋಮಯ್ಯ—ನಿನಗಲ್ಲದೆ ಮತ್ತಾರಿಗೆ ನಾನು ನೆರವಾಗುವುದು?

ಶಿವಯ್ಯ—ಈಗೊದಗಿರುವ ಪರಿಸ್ಥಿತಿಯನು ಪರ್ಯಾಲೋಚಿಸಿದರೆ ಅದರಿಂದ ನಿನಗೂ ಮಹದುಪಕಾರವಾಗಬಹುದು.

ಸೋಮಯ್ಯ—ಏನದು?

ಶಿವಯ್ಯ—ರಾಜ್ಯ ಲಾಭ!

ಸೋಮಯ್ಯ—ರಾಜ್ಯ ಲಾಭ! (ಆಲೋಚಿಸಿ) ಹೌದು, ಅರ್ಥವಾಯಿತು. ಆದರೆ ಬಸವಯ್ಯನಿದ್ದಾನಲ್ಲವೆ?

ಶಿವಯ್ಯ—ಅದನ್ನೇ ನಾನೂ ಹೇಳುತ್ತಿರುವುದು! ನಿನಗೂ ನಿನ್ನ ಶ್ರೇಯಸ್ಸಿಗೂ ನಡುವೆಯಿರುವ ಅರಣ್ಯವೇ ನನಗೂ ನನ್ನ ಪ್ರೇಯಸಿಗೂ ನಡುವೆ ಬಂದಿದೆ. ಅದನು ದಹಿಸದೆ ನಾವು ಕೃತಾರ್ಥರಾಗಲಾರೆವು.

ಸೋಮಯ್ಯ—ಏನದು, ಬಿಡಿಸಿ ಹೇಳಬಾರದೆ?

ಶಿವಯ್ಯ—ನಾನು ರುದ್ರಾಂಬೆಯನು ಮೋಹಿಸಿದ್ದೇನೆ.

ಸೋಮಯ್ಯ—ಹೌದು, ನನಗೆ ಗೊತ್ತಿದೆ.

ಶಿವಯ್ಯ—ಆದರೆ ಆಕೆ ನನ್ನನ್ನು ಕಣ್ಣೆತ್ತಿ ಕೂಡ ನೋಡುತ್ತಿಲ್ಲ.

ಸೋಮಯ್ಯ—ಅದೇಕೆ? ನಿನಗೇನು ರೂಪವಿಲ್ಲವೆ? ವಿದ್ಯೆಯಿಲ್ಲವೆ? ಸಂಪತ್ತಿಲ್ಲವೆ?

ಶಿವಯ್ಯ—ಬಸವಯ್ಯನಿರುವವರೆಗೆ ಆಕೆ ಶಿವಯ್ಯನಿಗೆ ಲಭಿಸುವಂತಿಲ್ಲ.—ನಿನಗೆ ರಾಜ್ಯ ಲಭಿಸುವಂತಿಲ್ಲ.

ಸೋಮಯ್ಯ—ಹೌದು, ಮಾಡುವುದೇನು?

ಶಿವಯ್ಯ—ಏನಿದು? ಸೇನಾಪತಿಯ ಪುತ್ರನಾಗಿ "ಮಾಡುವುದೇನು?" ಎನ್ನುತ್ತೀಯಲ್ಲಾ! ರಾಣಿಗೆ ನಿನ್ನ ತಂದೆಯಲ್ಲಿ ಎಷ್ಟು ಸ್ನೇಹ! ಎಷ್ಟು ಸಲಿಗೆ! ಎಷ್ಟು ಪ್ರೇಮ!

ಸೋಮಯ್ಯ—ಶಿವಯ್ಯ, ಅದರಿಂದ ಲಾಭವೇನೇ ಇರಲಿ, ನನಗೇನೋ ಅದು ಹಿತವಾಗಿಲ್ಲ.

ಶಿವಯ್ಯ—ಈ ಸ್ವಪ್ನಾದರ್ಶಗಳನ್ನೆಲ್ಲ ಮೂಲೆಗಿಡು. ಅವುಗಳೆಲ್ಲ ಕಾವ್ಯಕ್ಕೆ; ವಾದಕ್ಕೆ! ವ್ಯವಹಾರಕ್ಕಲ್ಲ! ನೀನೂ ಬಸವಯ್ಯನಂತೆಯೇ ಆದೆಯೋ ಹೇಗೆ? ಅವನೂ ಕೂಡ ಈಗೀಗ ಕನಸಿನಿಂದ ಇಳಿದು ಬರುತ್ತಿದ್ದಾನೆ. ನೀನೇಕೋ ಸ್ವಪ್ನಜೀವಿಯಾಗುವಂತಿದೆ!

ಸೋಮಯ್ಯ—ಶಿವಯ್ಯ, ಅವಳು ಮಹಾಪಾಪಿಷ್ಠೆ!

ಶಿವಯ್ಯ (ಹುಸಿನಗೆಯಿಂದ)—ಅಯ್ಯೋ ಪಾಪ ಪುಣ್ಯಗಳನು ಕಟ್ಟಿಕೊಂಡು ನಮಗೇನು? ಪಾಪವೋ ಪುಣ್ಯವೋ ಪ್ರಯೋಜನವಾದರೆ ಸಾಕು. ನಿನಗೆ ರಾಜತ್ವ ಬೇಡವೇ?

ಸೋಮಯ್ಯ—ಯಾರಾದರೂ ಬೇಡವೆನ್ನುವರೇ?

ಶಿವಯ್ಯ—ಹಾಗಾದರೆ ಪಾಪ ಪುಣ್ಯಗಳನ್ನೆಲ್ಲ ಮೂಲೆಗಿಟ್ಟು ಕೆಲಸಕ್ಕೆ ಅನುವಾಗು. ಅವಳು ಯಾರಾದರೇನಂತೆ? ನಿನ್ನ ತಂದೆಗೆ ಬೇಕಾದವಳಾಗಿದ್ದಾಳೆ. ನೀನು ಸ್ವಲ್ಪ ಪ್ರಯತ್ನಪಟ್ಟರೆ ಬಿದನೂರು ಸಿಂಹಾಸನ ನಿನ್ನ ಕೈಸೇರುವುದು. ನೀನು ಒಂದಡಿ ಮುಂದಿಟ್ಟರೆ ರಾಜ್ಯಲಕ್ಷ್ಮಿ ಹತ್ತಡಿ ಮುಂದಿಟ್ಟು ನಿನ್ನೆಡೆಗೆ ಹಾರಿಬರುವಳು.

ಸೋಮಯ್ಯ—ಈಗೇನು ಮಾಡಬೇಕೆನ್ನುವೆ?

ಶಿವಯ್ಯ—ನಾನು ನಿನಗೆ ನೆರವಾಗುತ್ತೇನೆ. ನಿನ್ನಿಂದ ನನಗೂ ಉಪಕಾರವಾಗುವುದು. ನಿನಗೆ ರಾಜ್ಯ ದೊರಕುವುದು. ನನಗೆ ರುದ್ರಾಂಬೆ ಲಭಿಸುವಳು. ನಿನ್ನಲ್ಲಿ ಪೌರುಷವಿದ್ದರೆ ಮುಂದುವರಿ!

ಸೋಮಯ್ಯ—ಏನೆಂದು ತಿಳಿದಿರುವೆ? ಎದ್ದು ನಿಂತರೆ ನಾನು ಹುಲಿ!

ಶಿವಯ್ಯ—ಬಸವಯ್ಯನ ಕೊಲೆ!

ಸೋಮಯ್ಯ (ಬೆಚ್ಚಿದವನಂತೆ)—ಏನು? ಏನು!

ಶಿವಯ್ಯ (ದೃಢವಾಣಿಯಿಂದ)—ಬಸವಯ್ಯನ ಕೊಲೆ!

ಸೋಮಯ್ಯ—ಶಿವಯ್ಯ, ಜಿದಸೂರು ದೊರೆತನಕೆ ಕೊಲೆ ಹೆಚ್ಚು ಬೆಲೆ! ಅದರಲ್ಲಿಯೂ ಗೆಳೆಯನ ಕೊಲೆ!

ಶಿವಯ್ಯ (ವಿಕಟವಾಗಿ ನಕ್ಕು)—ನಿನ್ನ ಕೆಚ್ಚಿಗೆ ಕಿಚ್ಚಿಡಲಿ! ಸೇನಾಪತಿಯ ಮಗನಾದುದಕೆ ಸಾರ್ಥಕವಾಯಿತು! ಹೋಗಲಿ, ನೀನು ಕೊಲೆ ಮಾಡಬೇಡವಯ್ಯ; ಮಾಡುವವರು ಮಾಡುವರು! (ಬಾಗಿಲಲ್ಲಿ ಸದ್ದು) ಯಾರಲ್ಲಿ? (ಸೋಮಯ್ಯ ಬಾಗಿಲು ತೆರೆಯೆ ತಿಮ್ಮಜಟ್ಟಿ ಬರುತ್ತಾನೆ.) ಏನು ಜಟ್ಟಿ, ನೀನು ಹೋಗಿದ್ದ ಕಾರ್ಯವೇನಾಯಿತು?

ಸೋಮಯ್ಯ—ಏನು ಕಾರ್ಯ?

ತಿಮ್ಮಜಟ್ಟಿ—ಏನೂ ಇಲ್ಲ, ಸ್ವಾಮಿ. ಸಂನ್ಯಾಸಿಗಳಿಂದ ತಾಯಿತಿ ತರಲು ಹೇಳಿದ್ದರು. (ತಾಯಿತಿಯನ್ನು ಶಿವಯ್ಯನಿಗೆ ಕೊಡಲು)

ಸೋಮಯ್ಯ—ಅದೇನದು, ಶಿವಯ್ಯ?

ಶಿವಯ್ಯ—ಸ್ತ್ರೀವಶೀಕರಣ ಯಂತ್ರ!

ಸೋಮಯ್ಯ—ರುದ್ರಾಂಬೆಗಾಗಿಯೇ? (ಶಿವಯ್ಯ ಮುಗುಳ್ನಗುವನು.)

ತಿಮ್ಮಜಟ್ಟಿ—ಇನ್ನೊಂದು ಹೊಸ ಸುದ್ದಿ, ಸ್ವಾಮಿ! ಏನೋ ಕೇಡುಗಾಲ!

ಶಿವಯ್ಯ—ಏನದು?

ತಿಮ್ಮಜಟ್ಟಿ—ಸಂನ್ಯಾಸಿಗಳಿಂದ ಗೊತ್ತಾಯಿತು.

ಶಿವಯ್ಯ—ಏನದು?

ತಿಮ್ಮಜಟ್ಟಿ—ಕೆಂಚಣ್ಣ ಹೇಳಿದನಂತೆ!

ಶಿವಯ್ಯ (ಗಟ್ಟಿಯಾಗಿ)—ಅದೇನು ಹೇಳಬಾರದೆ! (ಜಟ್ಟಿ ಬೆದರಲು)

ಸೋಮಯ್ಯ—ಇದೇಕೆ ಹೀಗೆ ಬೆಚ್ಚುತ್ತಿದ್ದೀಯೆ?

ತಿಮ್ಮಜಟ್ಟಿ—ತೀರಿಹೋದವರು ಭೂತವಾಗಿ ಕಾಣಿಸಿಕೊಂಡರಂತೆ!

ಶಿವಯ್ಯ }
ಸೋಮಯ್ಯ }—ಯಾರು? ಯಾರು?

ತಿಮ್ಮಜಟ್ಟಿ—ದೊರೆಗಳು!

ಶಿವಯ್ಯ }
ಸೋಮಯ್ಯ }—ಏನು! ಏನು!

ತಿಮ್ಮಜಟ್ಟಿ—ಆಚೆಮೊನ್ನೆ ರಾತ್ರಿ ಕೆಂಚಣ್ಣ ಕಾವಲಿದ್ದಾಗ ಕಂಡನಂತೆ. ಮೊನ್ನೆ ರಾತ್ರಿ ಹೊನ್ನಯ್ಯನವರೂ ಹೋಗಿ ಕಂಡರಂತೆ. ನಿನ್ನೆ ರಾತ್ರಿ ಬಸವಯ್ಯನವರೂ ಕಾಣಲು ಹೋಗಿದ್ದರಂತೆ.

ಸೋಮಯ್ಯ—ಇದೇನೊ ಕೌತುಕದ ಸುದ್ದಿ.

ಶಿವಯ್ಯ—ರಾಣಿಯವರಿಗೆ ಗೊತ್ತಿದೆಯೇ ಇದು ?

ತಿಮ್ಮಜಟ್ಟಿ—ಇಲ್ಲ.

ಶಿವಯ್ಯ—ಹೋಗಿ ತಿಳಿಸು, ಬೇಗ ನಡೆ. (ಜಟ್ಟಿ ತೆರಳುವನು.) ನೋಡಿದೆಯಾ ? ನೀನೀಗ ಹಿಂಜರಿದರೆ ನಿನಗೂ ಕೇಡು, ನಿನ್ನ ತಂದೆಯವರಿಗೂ ಕೇಡು ! ಮುಂಬರಿದರೆ ಇಬ್ಬರಿಗೂ ಲಾಭ !

ಸೋಮಯ್ಯ—ಭೂತ ಮಾತಾಡಿದ್ದರೆ, ಅನಾಹುತ !

ಶಿವಯ್ಯ—ಬಸವಯ್ಯನು ಲಿಂಗಣ್ಣ ಮಂತ್ರಿಗಳೊಡನೆ ಸೇರಿ ನಿನ್ನಯ್ಯನ ಮೇಲೆ ಕತ್ತಿಕಟ್ಟುವನು. ನಿನಗೂ ಶುಭವಾಗುವಂತೆ ತೋರುವುದಿಲ್ಲ.

ಸೋಮಯ್ಯ—ಈಗೇನು ಮಾಡಬೇಕಾಯಿತು ?

ಶಿವಯ್ಯ—ಬೇಗ ಹೋಗಿ ನಿನ್ನ ತಂದೆಗೂ ರಾಣಿಗೂ ಈ ಸುದ್ದಿಯನೊರೆದು ಅವರಿಬ್ಬರನೂ ಹಿಡಿದು ಮೊದಲು ಸೆರೆಯೊಳಿಡಬೇಕು. ಆಮೇಲೆ—ನೋಡೋಣ. ನಿನ್ನ ಸಹಾಯಕ್ಕೆ ನಾನಿದ್ದೇನೆ, ಹೆದರಬೇಡ. ನಿನಗೆ ರಾಜ್ಯ ; ನನಗೆ ರುದ್ರಾಂಬೆ !

ಸೋಮಯ್ಯ—ಹಾಗಾದರೆ ಈಗಲೇ ಹೋಗಬೇಕು. ತಡಮಾಡಿದರೆ ತಪ್ಪಾಗಬಹುದು. (ಏಳುವನು.)

ಶಿವಯ್ಯ (ಏಳುತ್ತ)—ನೀನು ಅರಮನೆಗೆ ಓಡು. ನಾನು ವಿಶೇಷ ವರ್ತಮಾನಗಳನ್ನು ತಿಳಿದುಕೊಂಡು ಅಲ್ಲಿಗೆ ಬರುತ್ತೇನೆ. ಬೇಗ !

(ಇಬ್ಬರೂ ಹೋಗುವರು.)

[ಪರದೆ ಬೀಳುವುದು.]

## ದೃಶ್ಯ ೩

[ಬಿದನೂರಿನ ಅರಮನೆಯಲ್ಲಿ ಚೆಲುವಾಂಬೆ ನಿಂಬಯ್ಯ ಮಾತಾಡುತ್ತಿರುತ್ತಾರೆ]

ನಿಂಬಯ್ಯ—ದೇವಿ,

ತಿಮ್ಮಜಟ್ಟಿಯ ಕಥೆ ದಿಟವೊ ಸಟೆಯೋ ನನಗೆ
ಸಂದೇಹ.

ಚೆಲುವಾಂಬೆ— ಸಂದೇಹವೇತಕ್ಕೆ ? ನಮ್ಮೊಡನೆ
ಸುಳ್ಳಾಡುವನೆ ಜಟ್ಟಿ ?

ನಿಂಬಯ್ಯ— ಎಲ್ಲಿಯಾದರೂ ಉಂಟೆ?
ಸತ್ತವರು ಮರಳಿ ಭೂಮಿಗೆ ಮರಳುವುದು ನಿಜವೆ?
ಚೆಲುವಾಂಬೆ—ತರ್ಕಕ್ಕೆ ತಾವಲ್ಲವೀ ಭೂಮಿ! ಇಲ್ಲಿ
ಏನು ಬೇಕಾದರೂ ನಡೆಯಬಹುದು!
ನಿಂಬಯ್ಯ (ನಸುನಕ್ಕು)— ಹೆಂಗುಸರ ನಂಬುಗೆಗೆ
ಕಣ್ಣಿಲ್ಲ, ಕಾಲಿಲ್ಲ! ಬಾಯಿ ಬೇಕಾದಷ್ಟು!
ಮನ್ನಿಸೆನ್ನನು, ದೇವಿ. ನನಗೇನೊ ಸಂದೇಹ.
ಚೆಲುವಾಂಬೆ—ಹಾಗಾದರಾ ಕಥೆಗೆ ನಿನ್ನ ವಿವರಣೆ ಏನು?
ನಿಂಬಯ್ಯ—ವಿವರಣೆಯೆ? ನೀನು ಊಹಿಸಲಾರೆಯಾ, ಕೇಳು!
ಚೆಲುವಾಂಬೆ—ನನ್ನ ಬಗೆ ಕದಡಿಹುದು. ನಾನು ಊಹಿಸಲರಿಯೆ.
ನಿಂಬಯ್ಯ— ಬಸವಯ್ಯನೂಹೆಯಾತ್ಮಕೆ ದೇಹವನು ನೀಡೆ
ಯಾರೊ ಸೃಜಿಸಿದ ಸಂಚು! ನಮ್ಮನೆಂತಾದರೂ
ಅಪರಾಧಿಗಳು ಎಂದು ಮೂಲೆಗೊತ್ತಲು ನೆಯ್ದ
ಜಾಲವಿದು. ಬಲೆಯು ನಮ್ಮನು ಸುತ್ತಿ ಬೀಳಿಸುವ
ಮುನ್ನವೇ ನಾವದನು ತುಂಡುಗೈಯಲೆ ಬೇಕು.—
ಏನನಾಲೋಚಿಸುವೆ? ನಿನಗೆ ಭಯವಾಗಿದೆಯೆ?
ಚೆಲುವಾಂಬೆ—ಭಯವಲ್ಲ. ಮುಂದಿನ ಉಪಾಯವನು ನೆನೆಯುತಿಹೆ.
ಏನನೆಸಗುವುದೊ ನಾನರಿಯೆ.
ನಿಂಬಯ್ಯ— ನಾನರಿವೆ!
ನಿನ್ನ ಬೆಂಬಲವಿರಲು ನಾನೆಲ್ಲ ಮಾಡುವೆನು.
ಚೆಲುವಾಂಬೆ—ಅದು ಏನು?
ನಿಂಬಯ್ಯ— ಹಿಂದುಮುಂದನು ನೋಡದೆಯೆ ಈಗ
ಬಸವಯ್ಯ ಲಿಂಗಣ್ಣರನು ಹಿಡಿದು ಸೆರೆಮನೆಯೊ
ಳಿಡಬೇಕು.
ಚೆಲುವಾಂಬೆ— ಪ್ರಮಾದವಾಗುವುದು!
ನಿಂಬಯ್ಯ— ಏಕೆ?
ಚೆಲುವಾಂಬೆ—ಜನರು ನಮ್ಮದೆ ತಪ್ಪು ಎಂದು ನಿರ್ಧರಿಸಿ
ದಂಗೆಯೇಳದೆ ಬಿಡರು. ಬಸವಯ್ಯ ಲಿಂಗಣ್ಣ
ಇಬ್ಬರೂ ಜನರ ಪ್ರೀತಿಗೆ ಪಾತ್ರರಾದವರು.
ನಮ್ಮ ಸೈನ್ಯವು ಕೂಡ ನಮಗೆದುರುಬೀಳುವುದೊ
ಏನೊ ನಾ ಕಾಣೆ!

ನಿಂಬಯ್ಯ— ಪೊಳ್ಳು ಭಯವಿದು, ದೇವಿ.
ಜನರು ? ಜನರು ಕುರಿಗಳು ! ನನ್ನ ಮುಂದವರು
ನಿಲ್ಲುವರೆ ? ಸೈನ್ಯದ ವಿಧೇಯತೆಯೊ ನನಗಿರಲಿ !—
ಬಾ ಸೋಮಯ್ಯ—(ಸೋಮಯ್ಯನು ಬರುತ್ತಾನೆ.)

ಚೆಲುವಾಂಬೆ—ಏನು ಸುದ್ದಿ, ಸೋಮಯ್ಯ ? ತಿಮ್ಮ ಜಟ್ಟಿ ಹೇಳಿದುದೆಲ್ಲ ನಿಜವೇ ?

ಸೋಮಯ್ಯ—ನಿಜವೋ ? ಸುಳ್ಳೋ ? ನನಗೆ ತಿಳಿಯದು. ಸುದ್ದಿ ಊರೊಳಗೆಲ್ಲ ಹಬ್ಬಿಹೋಗಿದೆ. ಪುರಜನರು ಗುಂಪು ಗುಂಪಾಗಿ ಸೇರಿ ಮಾತಾಡಿಕೊಳ್ಳುತಿದ್ದಾರೆ.

ನಿಂಬಯ್ಯ—ಬಸವಯ್ಯನೆಲ್ಲಿ, ನಿನಗೆ ಗೊತ್ತಿದೆಯೆ ?

ಸೋಮಯ್ಯ—ಬಸವಯ್ಯನು ಲಿಂಗಣ್ಣ ಮಂತ್ರಿಗಳ ನಿಲಯದಲ್ಲಿ ಯಾವುದೋ ರಾಜಕಾರ್ಯದಲಿ ತೊಡಗಿದ್ದಾನೆ ಎಂದು ವಾರ್ತೆ. ನಿಜವನರಿಯಲು ಶಿವಯ್ಯ ಹೋಗಿದ್ದಾನೆ.

ನಿಂಬಯ್ಯ—ದೇವಿ, ಇನ್ನು ಕಾಲವಿಳಂಬಮಾಡಿದರೆ ನಮಗೆ ಶುಭವಲ್ಲ.

ಚೆಲುವಾಂಬೆ—ಸೋಮಯ್ಯ, ನೀನಿನ್ನು ಮುಂದೆ ನನ್ನ ದತ್ತುಕುವರ. ನಿನ್ನ ತಂದೆಯವರಂತೆಯೆ ನೀನೂ ನಮಗೆ ಈ ವಿಷಮ ಸಮಯದಲಿ ಸಹಾಯವಾಗಿರಬೇಕು.

ಸೋಮಯ್ಯ—ಹಾಗೆಯೆ ಆಗಲಿ, ತಾಯಿ.

ನಿಂಬಯ್ಯ—ಶಿವಯ್ಯನೇಕೆ ಇತ್ತಕಡೆಗೇ ಓಡಿಬರುತ್ತಿದ್ದಾನೆ ?

ಸೋಮಯ್ಯ—ಏನೋ ಅವಸರದ ಸುದ್ದಿಯಿರಬೇಕು ! (ಶಿವಯ್ಯ ಬರುವನು.)

ಚೆಲುವಾಂಬೆ—ಏನಾಯ್ತು, ಶಿವಯ್ಯ ?

ಶಿವಯ್ಯ—ಬಸವಯ್ಯನು ಲಿಂಗಣ್ಣ ಮಂತ್ರಿಗಳೊಡನೆ ಪಿತೂರಿ ನಡೆಯಿಸುತ್ತಿದ್ದಾನೆ. ಊರಿನಲ್ಲೆಲ್ಲ ಹಾಹಾಕಾರ ಹಬ್ಬುತ್ತಿದೆ. ನಿಮಗೆ ಕ್ಷೇಮಕರವಾಗಿಲ್ಲ. ತಡಮಾಡಿದರೆ ಅಮಂಗಳವಾಗಬಹುದೆಂದು ಓಡಿಬಂದೆ.

ನಿಂಬಯ್ಯ—ಸೋಮಯ್ಯ, ಶಿವಯ್ಯನೊಡನೆ ಹೋಗಿ ಸೇನೆ ಸಿದ್ಧವಾಗಿರುವಂತೆ ರುದ್ರಯ್ಯನಿಗೆ ತಿಳಿಸು. ಬೇಗ ನಡೆ. ನಾನು ಹಿಂದೆಯೇ ಬರುತ್ತೇನೆ.

(ಸೋಮಯ್ಯ ಶಿವಯ್ಯ ಹೋಗುವರು.)

ಚೆಲುವಾಂಬೆ—ಪ್ರಿಯನೇ, ಎಚ್ಚರಿಕೆಯಿಂದ ಮುಂಬರಿಯಬೇಕು.

ನಿಂಬಯ್ಯ— ಎಚ್ಚರಿಕೆಗಿಂತಲೂ ಕೆಚ್ಚು ಇರಬೇಕೀಗ.
ದೇವಿ, ನಿನಗೆ ಭಯಬೇಡ. ನಾನೆಲ್ಲವನು
ಮಾಡುವೆನು. ನಿನ್ನೊಲ್ಮೆಯೊಂದಿರಲಿ, ಸಾಕದೇ
ನನಗೆ ಬಲ್ಮೆ ! ಅವರಿಬ್ಬರೆಮಗೆರಡು

ಕತ್ತರಿಗಳಾಗಿಹರು. ದುಃಖದಾಧಾರಗಳನು
ಮೊದಲು ಪರಿಹರಿಸುವುದೆ ಸುಖಕೆ ಆಧಾರ!
ನನ್ನೊಡನೆ ನೀನೂ ಬಾ. ನಿನ್ನ ಸಾನ್ನಿಧ್ಯವೇ
ಭಕ್ತಿಯನ್ನುದ್ರೇಕಗೊಳಿಸುವುದು ಸೈನಿಕರಲಿ!

[ಪರದೆ ಬೀಳುವುದು.]

## ದೃಶ್ಯ ೪

(ಲಿಂಗಣ್ಣ ಮಂತ್ರಿಯ ಮನೆಯಲ್ಲಿ ಲಿಂಗಣ್ಣ, ರುದ್ರಾಂಬೆ, ಬಸವಯ್ಯ, ಹೊನ್ನಯ್ಯ ಎಲ್ಲರೂ ಮಾತಾಡುತ್ತಿರುವರು.)

ಬಸವಯ್ಯ—ಮಂತ್ರಿಗಳೆ,
ನನ್ನೊಹೆ ತಪ್ಪೆಂದು ನೀವು ತಿಳಿದುದೆ ತಪ್ಪು!
ಹೊನ್ನಯ್ಯನಿಹನಿಲ್ಲಿ ಅದಕೆ ಸಾಕ್ಷಿ.
ಹೊನ್ನಯ್ಯ—ಬಸವಯ್ಯನಾಡುವುದು ದಿಟ; ನಾನೆ ಕಣ್ಣಾರೆ
ಕಂಡಿಹೆನು. ಬಸವಯ್ಯನದರೊಡನೆ ತೆರಳಲ್ಕೆ
ಯತ್ನಿಸಲು ನಾನೆನಿತು ತಡೆದೆನೆಂಬುದ ಕೇಳಿ.
ಬಸವಯ್ಯ—ಚಂದ್ರಿಕೆಯ ಮಾಯೆಯಲಿ ರಾಜಗಾಂಭೀರ್ಯದಲಿ
ಐತಂದುದಾ ರೂಪು. ನೋಡಿದರೆ ತಂದೆಯನೆ
ಹೋಲಿತ್ತು. ಅದೆ ಉಡುಗೆ! ಅದೆ ತೊಡುಗೆ! ಅದೆ ನಡಿಗೆ!
ಆಮೇಲೆ ಅದು ನುಡಿಯೆ ನನ್ನಯ್ಯನದೆ ವಾಣಿ!
ಮಾತನಾಡಿಸಲು ಕೈಬೀಸಿ ಕರೆದುದೆನ್ನನು.
ಕೈಹಿಡಿದು ನಿಲಿಸುತ್ತಲಿದ್ದ ಹೊನ್ನಯ್ಯನನು
ಕೊಡಹಿ ಕೈಬಿಡಿಸಿಕೊಂಡು ಅದರೊಡನೆ ಹೋದೆ.
ರುದ್ರಾಂಬೆ—ಅಯ್ಯೊ, ಆಮೇಲೆ?
ಬಸವಯ್ಯ—ಹೇಳುತ್ತ ಅದು ಕಂಬನಿಯ ಸೂಸುತಿತ್ತು!
ಅಯ್ಯೊ ಆ ನೋವನೇನೆಂದು ಬಣ್ಣಿಸಲಿ?
ರುದ್ರಾಂಬೆ—ಏನೆಂದಿತು?
ಬಸವಯ್ಯ—		"ನಾ ನಿನ್ನ ಪಿತನ ಪ್ರೇತಾತ್ಮ;
ಅಕಾಲಮರಣದಿನಿಂತು ಪ್ರೇತವಾಗಿಹೆನು.
ಪ್ರೇತಭೂಮಿಯೊಳೆನ್ನ ಕರ್ಮ ಸವೆವನ್ನೆವರಂ
ನನಗೆ ತೊಳಲಿಕೆ ತಪ್ಪದೈ, ಮಗುವೆ. ಬೆದರದಿರು,

ಸತ್ತವರು ಕಾಣಿಸುವುದಪರೂಪವಾದರೂ
ಬೆದರದಿರೆನಗೆ, ಮಗುವೆ! ನನ್ನ ಲೋಕದ ಕಥೆಯ
ನಿನಗಿನಿತನೊರೆದರೂ ನಿನ್ನ ನೆತ್ತರು ತಣ್ಣು
ಹೆಪ್ಪುಗಟ್ಟೀತು! ಕುದಿದಾವಿಯಾದೀತು!
ಕಣೆಗಳಂದದಿ ನಿನ್ನ ಮೈನವಿರು ನಿಮಿರ್ನಿಂತು
ನಿನ್ನ ಬುದ್ಧಿಯು ನಮುತೆ ಕೆಟ್ಟೀತು! ಅಲ್ಲದೆಯೆ,
ನನ್ನ ಗುಟ್ಟನು ನಿನಗೆ ಹೇಳಲಾಣತಿಯಿಲ್ಲ,
ಮರ್ತ್ಯರಾದವರಿಗೆ ಅದನರಿಯೆ ಹಕ್ಕಿಲ್ಲ!''

ರುದ್ರಾಂಬೆ—ಮುಂದಾದುದೇನು? ನನ್ನೆದೆ ಕುದಿಯುತಿದೆ!

ಬಸವಯ್ಯ—''ಚೆಲುವಾಂಬೆ ನಿಂಬಯ್ಯರಿಬ್ಬರೂ ಸೇರಿ
ಔಷಧಿಯ ನೆವದಿಂದೆ ನನಗೆ ವಿಷವನು ಕುಡಿಸಿ
ಕೊಂದರು'' ಎಂದಿತು. ಕೊನೆಗೆ ಹೇಳುತ್ತ ಹೇಳುತ್ತ
''ಲಿಂಗಣ್ಣ ಮಂತ್ರಿಯುದು ಸರಳಹೃದಯವು, ಮಗೂ,
ಆತನರಿಯನು ನಿಜವ'' ಎಂದು ರೋದಿಸಿತು!
ಲಿಂಗಣ್ಣ ಮಂತ್ರಿಗಳೆ, ಓ ರುದ್ರಾಂಬೆ,
ನೀವು ಕಲ್ಲಾಗಿದ್ದರೂ ಕರಗುತಿದ್ದಿರಿ ಅಲ್ಲಿ.
ಪಾದರಿ ಎಂದು ಚೆಲುವಾಂಬೆಯನು ನಿಂದಿಸುತೆ, ದ್ರೋಹಿ
ಎಂದು ನಿಂಬಯ್ಯನನು ಶಪಿಸುತೆ ಇಂತೆಂದಿತು:
''ನೋಡೀಗಳಾ ಪಾದರಿ ತನ್ನ ವಿಟನೊಡನೆ
ಸರಸ ಸಲ್ಲಾಪದಲಿ ಸಂತೋಷದಲಿ ಕಾಲ
ಕಳೆಯುತ್ತಲಿಹಳು. ಬಸವಯ್ಯ, ವಂಶವ ಕೆಡಿಸಿದಾ
ಕುಲಗೇಡಿಯನು ಅವಳ ನಿಂಬಯ್ಯನೊಡಗೂಡಿ
ಜೀವದಿಂ ಸುಡಿಸಲಾರೆಯಾ ಬೆಂಕಿಯಲಿ ಅದ್ದಿ?
ಆಗಳೀಗೆನ್ನೆದೆಯು ತಣಿಯುವುದು, ಮಗುವೆ!
ಕಥೆ ಮುಗಿದುದೆಂದರಿಯಬೇಡ. ನಿನ್ನನು ಕೊಂದು
ರಾಜ್ಯವನ್ನಪಹರಿಸಲೂ ಯತ್ನಗೈಯುವನು
ಆ ಪಾಪಿ ನಿಂಬಯ್ಯ! ಎಚ್ಚರಿಕೆಯಿಂದಿರು!
ಲಿಂಗಣ್ಣನಿಗೆ ನಿಜವನೊರೆ! ಬೇಗ! ಇಲ್ಲದಿರೆ,
ತಳುವಿದರೆ ಅಳುಕಿದರೆ ಸರ್ವನಾಶ!
ಬಸವಯ್ಯ, ಬಿದನೂರು ಸಂಸ್ಥಾನವನು, ಬದುಕಿ
ಪಾಳ್ಗೆಯ್ಯದಿರು; ಸತ್ತು ನಿಂಬಯ್ಯಗೀಯದಿರು!''

ಇಂತೊರೆಯುತಿರೆ ಮೂಡುದೆಸೆ ಕೆಂಪಡರ್ದುದನು
ಕಂಡು ಬೇಗನೆ ನನ್ನ ಬೀಳ್ಕೊಂಡಿತು ! —
ನಿಮಗಿನ್ನೂ ಸಂದೇಹವೇ ?

ರುದ್ರಾಂಬೆ—ಅಯ್ಯೊ ಪಾಪಿಷ್ಠೆ !
ನರಕವಿಂತುಟು ನಾಕವೇಷದಲಿ ಬಹುದೆಂದು
ನಾನರಿದುದಿಲ್ಲ.—(ಚಿಂತಿಸುತ್ತಿರುವ ಲಿಂಗಣ್ಣನನ್ನು ನೋಡಿ)
ತಂದೆಯೇ, ನಿಮಗಿನ್ನು ಸಂದೇಹವೇಕೆ ?

ಲಿಂಗಣ್ಣ (ಕಂಬನಿದುಂಬಿ ಎದುರಿಗೆ ಯಾರನ್ನೋ ನೋಡಿದವನಂತೆ)—
ಅಯ್ಯೊ ಮಹಾರಾಜನೆ,
ನಿನ್ನ ಬಳಿ ನಾನಿದ್ದರೂ ಇಲ್ಲದಂತಾಯ್ತೆ ?
ನೀನು ಮದ್ದನು ಒಲ್ಲೆನೆಂದರೂ ನಾನೆಯೆ
ಬಲವಂತದಿಂದೆ ಕುಡಿಸಿದೆನಲ್ಲಾ ! ಶಿವ ಶಿವಾ !
ಅವರಲ್ಲ, ಅವರಲ್ಲ ! ನಾನೆ ಕೊಲೆಪಾತಕನು !
ಅದಕೆ ಮುಯ್ ತೀರಿಸಿಯೆ ತೀರುವೆನು !
ಲಿಂಗಣ್ಣನೆದೆಯಲ್ಲಿ ಜೀವವಿರುವನ್ನೆವರಂ,
ಧಮನಿಯಲಿ ನೆತ್ತರಿರುವನ್ನೆವರಂ
ದುಷ್ಟ ಶಿಕ್ಷೆಗೆ ಸಾಹಸವ ಮಾಡಿ
ಋಣಮುಕ್ತನಾಗುವೆನು ! (ಬಸವಯ್ಯನಿಗೆ)—
ರಾಜಕುಮಾರ, ಕ್ಷಮಿಸೆನ್ನ !
ನೀನು ನನಗಿಂತಲೂ ಜಾಣ್ಮೆಯುಳ್ಳವನು.
ನನ್ನೀ ಮುದಿ ಮಿದುಳ್ಗೆ ಕಪಟವರಿಯುವ ಶಕ್ತಿ
ತೊಲಗಿಹುದು. ಆದುದಾಯಿತು ; ಇನ್ನು —

ರುದ್ರಾಂಬೆ—ಇನ್ನು ಪ್ರಾಯಶ್ಚಿತ್ತ !

ಹೊನ್ನಯ್ಯ—　　　　　　　　ನಾವೆಚ್ಚರುವ ಮುನ್ನ
ಅವರೆ ಎಚ್ಚರಗೊಂಡು ಕೆಲಸ ಕೆಡಬಹುದು.
ಹಾವು ಮೊಟ್ಟೆಯನೊಡೆದು ಹೊರಗೆ ಬಹ ಮುನ್ನವೇ
ಮೊಟ್ಟೆಯನು ಸುಟ್ಟು ಬೂದಿಮಾಡಲೆಬೇಕು.

ಲಿಂಗಣ್ಣ— ಹೊನ್ನಯ್ಯ, ನೀನು ನಡೆ. ರುದ್ರಯ್ಯನೇ
ಮೊದಲಾದ ದಳದಳದ ನಾಯಕರಿಗಿದನೊರೆದು
ನಿಂಬಯ್ಯ ಚೆಲುವಾಂಬೆಯರ ಕುಹಕಕಿಳಿಯದಂತೆ

ಮಾಡು. ನಾವೀಗಳೊಡನೆಯೆ ಬಂದು ಕಾಣುವೆವು.

(ಹೊನ್ನಯ್ಯ ಹೋಗುವನು.)

ಬಸವಯ್ಯ, ನಾವೀಗ ಸೇನೆಯನ್ನೂ
ಪುರಜನರನೂ ಕಂಡು ದಿಟವರುಹಿ, ಚೆಲುವಾಂಬೆ
ನಿಂಬಯ್ಯರನು ಹಿಡಿದು ಸೆರೆಗೊಯ್ಯಲೇ ಬೇಕು.
ಕೈಮಿಂಚಿದರೆ ನಮಗೇ ಅವರ ಗತಿಯಾದೀತು!

(ತೆರೆಯ ಹಿಂದೆ ಗದ್ದಲ.)

ಬಸವಯ್ಯ—ಗದ್ದಲವೇನದು ಹೊರಗೆ?

ರುದ್ರಾಂಬೆ—ನೋಡಿ ಬರುತ್ತೇನೆ. (ಹೋಗುವಳು.)

ಬಸವಯ್ಯ—ಮಂತ್ರಿಗಳೆ, ನನಗೇನೋ ಸಂದೇಹವಾಗುತಿದೆ. ನಾವು ತಡಮಾಡಿದೆವು! (ರುದ್ರಾಂಬೆ ಓಡಿಬರುವಳು.)

ಲಿಂಗಣ್ಣ—ಏನದು?

ರುದ್ರಾಂಬೆ—ಸೋಮಯ್ಯ ರುದ್ರಯ್ಯರು ಕೆಲವು ಜನ ಸೈನಿಕರೊಡನೆ ಬಂದಿದ್ದಾರೆ.

ಲಿಂಗಣ್ಣ—ಏಕೆ?

ರುದ್ರಾಂಬೆ—ನೋಡಿದೋ ಬಂದರು!

(ಸೋಮಯ್ಯ ರುದ್ರಯ್ಯರು ಸೈನಿಕರೊಡನೆ ಬರುವರು.)

ಸೋಮಯ್ಯ—ಲಿಂಗಣ್ಣ ಮಂತ್ರಿಗಳೆ, ನೀವೂ ಬಸವಯ್ಯನೂ ರಾಜಕೈದಿಗಳು.

(ಎಲ್ಲರೂ ಬೆರಗಾಗುವರು.)

ಲಿಂಗಣ್ಣ—ಏನಿದು, ರುದ್ರಯ್ಯ?

ಸೋಮಯ್ಯ (ಕೈಯಿಂದ ಎದುರಿರುವವರನ್ನು ನಿರ್ದೇಶಿಸಿ)—ಏನಿದು, ಮಂತ್ರಿಗಳೆ!

ರುದ್ರಯ್ಯ—ರಾಣಿಯವರ ಆಜ್ಞೆಯಾಗಿದೆ. ನಿಮ್ಮನ್ನೂ ಬಸವಯ್ಯನವರನ್ನೂ ಹಿಡಿದುತರುವಂತೆ.

ಬಸವಯ್ಯ (ಧೀರವಾಣಿಯಿಂದ)—ಗತಿಸಿದ ಬಿದನೂರರಸರ ಪುತ್ರನಾದ ನಾನು ಆಜ್ಞೆಮಾಡುತ್ತೇನೆ, ರುದ್ರಯ್ಯ, ನೀನು ಹಿಂತಿರುಗುವುದೆಂದು! ಹಿಂತಿರುಗಿ, ಸೈನಿಕರೇ! (ಸೈನಿಕರು ಹಿಂದೆ ಮುಂದೆ ನೋಡುವರು.)

ಸೋಮಯ್ಯ—ರುದ್ರಯ್ಯಾದಿ ಸೈನಿಕರೇ, ನಿಮ್ಮ ಮುಂದಿನ ಶ್ರೇಯಸ್ಸನ್ನು ನೆನೆಯಿರಿ! ರಾಣಿ ಚೆಲುವಾಂಬೆ ನಿಮಗಿತ್ತ ಭಾಷೆಯನ್ನು ಮರೆಯದಿರಿ! ತಡಮಾಡದೆ ರಾಜದ್ರೋಹಿಗಳನ್ನು ಮೊದಲು ಹಿಡಿಯಿರಿ!

ಬಸವಯ್ಯ—ಎಲವೋ ಕಪಟಿಯ ಮಗನೇ! ಪಾಪಿಗಳ ಸಹಕಾರಿಯೇ!

(ಮುಂದೆ ನುಗ್ಗುವನು. ಲಿಂಗಣ್ಣ ಮಂತ್ರಿ ತಡೆದು ನಿಲ್ಲಿಸಿ)

ಲಿಂಗಣ್ಣ—ಬಸವಯ್ಯ, ದುಡುಕದಿರು. ಸತ್ಯಕ್ಕೆ ಜಯವಿದೆ.—ರುದ್ರಯ್ಯ, ನೀವೆಲ್ಲರೂ ಹಿಂತಿರುಗಿ ಹೋಗುವುದು. ನಾನೇ ಒಂದು ರಾಣಿಯವರನು ಕಾಣುತ್ತೇನೆ.

ಸೋಮಯ್ಯ—ಸೈನಿಕರೇ, ಏನು ನೋಡುವಿರಿ?

(ಸೈನಿಕರು ರುದ್ರಯ್ಯನನ್ನೇ ನೋಡುವರು.)

ರುದ್ರಯ್ಯ—ಮಂತ್ರಿಗಳೆ, ರಾಣಿಯ ಆಜ್ಞೆಯನು ನಾವು ಮೀರಲಾರೆವು. ನಿಮ್ಮನು ಸೆರೆಹಿಡಿದೇ ತರಬೇಕೆಂದು ನಮಗೆ ಕಟ್ಟಪ್ಪಣೆಯಿದೆ. (ಬಸವಯ್ಯನ ಕಡೆ ತಿರುಗಿ) ಪ್ರತಿಭಟಿಸಿದರೆ ಬಲಪ್ರಯೋಗಮಾಡಲೂ ಅಪ್ಪಣೆಯಿದೆ!

ಲಿಂಗಣ್ಣ—ಹಾಗೆಯೇ ಆಗಲಿ; ಬರುತ್ತೇವೆ ನಡೆಯಿರಿ. (ಬಸವಯ್ಯನಿಗೆ ಮೆಲ್ಲಗೆ) ನಾವೀಗ ಪ್ರತಿಭಟಿಸಿದರೆ ನಮಗೆ ಕೇಡಾಗುವುದು. ಯುಕ್ತಿಯಿಂದ ಮುಂದು ವರಿಯಬೇಕು. ಈಗ ಸುಮ್ಮನೆ ನನ್ನೊಡನೆ ಬಾ. (ರುದ್ರಾಂಬೆಗೆ) ಧೈರ್ಯವಾಗಿರು, ತಾಯಿ; ಹಿಂತಿರುಗಿ ಬರುತ್ತೇವೆ.

(ಸೈನಿಕರ ಪಹರೆಯಲ್ಲಿ ಲಿಂಗಣ್ಣ ಬಸವಯ್ಯರನ್ನು ಕರೆದುಕೊಂಡು ಎಲ್ಲರೂ ಹೋಗುವರು. ತಂದೆಯನ್ನೂ ಇನಿಯನನ್ನೂ ಬಿಡುಗಣ್ಣಾಗಿ ನೋಡುತ್ತ ರುದ್ರಾಂಬೆ ಕಂಬನಿದುಂಬಿ ನಿಲ್ಲುತ್ತಾಳೆ.)

[ಪರದೆ ಬೀಳುವುದು.]

---

# ಅಂಕ ಮೂರು

## ದೃಶ್ಯ ೧

(ಲಿಂಗಣ್ಣ ಮಂತ್ರಿಯ ಮನೆಯಲ್ಲಿ. ರುದ್ರಾಂಬೆ, ಶಿವಯ್ಯ ಮಾತಾಡುತ್ತಿರುವರು.)

ರುದ್ರಾಂಬೆ—ಶಿವಯ್ಯ, ಪಾಪಿಗಳು ಮೋಸದಿಂದರಸನನು
ಕೊಂದೀಗ ದೊರೆಯ ಮಗನನು, ಮಂತ್ರಿಯನು ಹಿಡಿದು
ಸೆರೆಯಲಿಡಲೆಂದೀ ಹೂಟವನು ಹೂಡಿದರು.

ಶಿವಯ್ಯ— ನಾನದನು ಕೇಳಿಯೇ ನಿನ್ನ ನೋಡಲು ಬಂದೆ.
ದಾರಿಯಲಿ ಸಿಕ್ಕ ಹೊನ್ನಯ್ಯನೆನಗೆಲ್ಲವನು
ಹೇಳಿದನು.

ರುದ್ರಾಂಬೆ— ಆತನೇಕಿನ್ನೂ ಬರಲಿಲ್ಲ?

ಶಿವಯ್ಯ— ಸೆರೆಮನೆಯ ಬಳಿಗೆ ಹೋದನೊ ಏನೊ?

ರುದ್ರಾಂಬೆ— ಏಕೆ?

ಶಿವಯ್ಯ— ಸೆರೆಹಿಡಿದರೆಂಬ ಸುದ್ದಿಯ ಕೇಳಿ ಸಿಡಿಲೆರಗಿ-
ದಂತಾಯ್ತು ನನಗೆ! ಸೆರೆಗೊಯ್ದರೆಂದು
ಕೇಳ್ದಾಗಳೆನ್ನ ನೆತ್ತರು ಕುದಿದು ಹೋಯಿತು.
ನಿನ್ನ ನೋವನು ನೆನೆದು ಸಂತವಿಡಲೆಂದು . . .

ರುದ್ರಾಂಬೆ—ಏನೆಂದೆ? ಸೆರೆಗೊಯ್ದರೇ?

ಶಿವಯ್ಯ— ಹೌದು; ನಿನಗದು
ತಿಳಿದಿರುವುದೆಂದಿದ್ದೆ!

ರುದ್ರಾಂಬೆ (ದುಃಖ ಧ್ವನಿಯಿಂದ)— ಅಯ್ಯೋ ತಂದೆಯೇ,
ಗಂಡಾಗಿ ಸಂಭವಿಸಬಾರದಾಗಿತ್ತೆ ನಾನು!

ಶಿವಯ್ಯ— ರೋದಿಸಿದರೇನಹುದು, ರುದ್ರಾಂಬೆ? ನೀನೀಗ
ಹೆಣ್ಣಾದರೇನಂತೆ? ಕೈಲಾಗದವಳೇನು?
ನಿನಗೆ ಬೆಂಬಲವಿಲ್ಲವೇ?

ರುದ್ರಾಂಬೆ— ನಾನು ಗಂಡಾಗಿದ್ದರೆ
ನನ್ನ ತಂದೆಯನಿಂತು ಸೆರೆಗೆ ಕೊಂಡೊಯ್ವರೇ?

ಶಿವಯ್ಯ— ಹಾಗೆನ್ನದಿರು. ನೀನು ಪುರುಷನಾಗಿದ್ದರೆ

ನೀನೊಬ್ಬಳೆಯೆ ನಿಂತು ಕಾದಾಡಬೇಕಿತ್ತು.
ಪುರುಷನಿಗೆ ತನ್ನ ಶಕ್ತಿಯೆ ಶಕ್ತಿ; ಸ್ತ್ರೀಗೆ
ಪುರುಷರೆಲ್ಲರ ಶಕ್ತಿ. ಸೌಂದರ್ಯದೆದುರಿಸಲಿ
ನೂರಾರು ವೀರ ಕರವಾಲಗಳು ಮಣಿಯುವುವು!
ಸೇವೆಮಾಡಲು ಜೀವನನೆ ಧಾರೆಯೆರೆಯುವುವು!
ಸೌಂದರ್ಯಕನಿಬರೂ ಕಿಂಕರರು! ಕೂರಸಿಗೆ
ಸೊಬಗೆಂಬುದೆಯೆ ಸಾಣೆ! ನೀನೀಗ ಬೆಸಸಿದರೆ
ಪುರುಷನಾವನು ಹಿಂಜರಿದು ನಿಲ್ಲುವನು ಹೇಳು!
ನೀನಳುಕಿದರೆ ಕೇಡು: ನೆರೆಯಾಳ್ಗಳನು ಕೊಲಲು
ಯತ್ನಿಸುವರೆಂಬುದನೂ ನಾ ಬಲ್ಲೆ!

ರುದ್ರಾಂಬೆ (ಕಾತರತೆಯಿಂದ)—　　ಏನೆಂದೆ?

ಶಿವಯ್ಯ— ರುದ್ರಾಂಬೆ, ಚೆಲುವಾಂಬೆ ನಿಂಬಯ್ಯರೆಂದರೆ
ಮಾನವರು ಎಂದರಿಯಬೇಡ; ಯಮನಾಳುಗಳು!—
ಜನಮಾನ್ಯ ಲಿಂಗಣ್ಣರಿಗೆ ಮುದಿತನದೊಳಿಂತು
ಕಳ್ಳರಂದದಿ ಸಾವ ಕಾಲವೈತಹುದೆಂದು
ತಿಳಿದಿದ್ದರಾರು? ಹಾ ವಿಧಿ!

ರುದ್ರಾಂಬೆ—　　ಅಯ್ಯೋ
ತಂದೆಯೇ, ನೀವಿಂತು ದುರ್ಮರಣಕೀಡಾದಿರಾ!
ಅರಸುಕುವರಾ, ಇದಕಾಗಿ ನೀನೆನ್ನ ನೊಲಿದೆಯಾ?

(ಉದ್ವೇಗದಿಂದ ನೋಯುವಳು. ಶಿವಯ್ಯ ಹತ್ತಿರ ಹೋಗಿ)

ಶಿವಯ್ಯ— ಬಸವಯ್ಯನಿಂದಲೇ ನಿನ್ನ ತಂದೆಗೆ ಇಂಥ
ದುರವಸ್ಥೆ ಬಂದಿದೆ!

ರುದ್ರಾಂಬೆ—　　ಬೇಡ ಹಾಗೆನ್ನದಿರು!

ಶಿವಯ್ಯ— ಸಿಡಿಲ ಸದ್ದನು ಕೇಳಲಳುಕಿ, ಮಿಂಚನು ನೋಡ-
ಲಳುಕಿ ತಲೆಯನು ಮಳಲಿನಲಿ ಮುಚ್ಚುವಾ ಒಂಟೆ-
ಹಕ್ಕಿಯೊಲು ನೀನಿಂತು ದಿಟದ ರೌದ್ರತೆಗೆ
ಬೆದರಿ ಸಟೆಯನು ಮುಸುಗುಹಾಕಿಕೊಳ್ಳುತ್ತಿರುವೆ,
ರುದ್ರಾಂಬೆ! ಬಸವಯ್ಯನೇ ಇದಕೆ ಕಾರಣನು.
ನಿನ್ನ ಮೇಲಿರುವಾತನೊಲ್ಮೆಯೇ ಲಿಂಗಣ್ಣ
ಮಂತ್ರಿಯನು ನೆರೆಗೆ ಕೊಂಡೊಯ್ದಿಹುದು. ಆದರೂ

ನಿನ್ನ ಕೈಲಿದೆ ಅವನನುಳುಹುವುದು.

ರುದ್ರಾಂಬೆ (ನೆಚ್ಚುಮೂಡಿ)— ಏನು !

ಶಿವಯ್ಯ— ನಿನ್ನ ಕೈಲಿದೆ ಅವನನುಳುಹುವುದು !

ರುದ್ರಾಂಬೆ—ನನ್ನ ಜೀವವನಾದರೂ ತೆತ್ತು ಸಲಹುವೆನು.

ಶಿವಯ್ಯ— ನಿನ್ನ ಜೀವಕ್ಕಿಂತಲೂ ನಿನಗೆ ಹತ್ತುಮಡಿ
ಪ್ರಿಯವಾದುದನು ತೆತ್ತು ಸಲಹಬಲ್ಲೆಯಾ ಹೇಳು !

ರುದ್ರಾಂಬೆ—ಏನದು ? ಹೇಳು !

ಶಿವಯ್ಯ— ನೀನೊಪ್ಪುವೆಯೋ ಇಲ್ಲವೋ ನಾನರಿಯೆ.

ರುದ್ರಾಂಬೆ—ಹೇಳು ! ಹೇಳು ! ಹೇಳು, ಶಿವಯ್ಯ !
ನಾನೊಪ್ಪಿಯೇ ಒಪ್ಪುವೆನು, ಹೇಳು !

ಶಿವಯ್ಯ— ನಿನ್ನ ಪ್ರೇಮದ ಮುಖವ ತಿರುಗಿಸುವೆಯಾ ?

(ರುದ್ರಾಂಬೆ ಬೆಚ್ಚಿ ನೋಡುವಳು.)

ಬಸವಯ್ಯನನು ತೊರೆದು ನೀನೆನ್ನನೊಲಿದರೆ
ನನ್ನ ಕೇಡನು ಗಣಿಸದೆಯೆ ಅವರನೆಂತಾದರೂ
ಬಿಡಿಸುವೆನು.

ರುದ್ರಾಂಬೆ— ಅಣ್ಣನನು ಒಲಿಯುವಂತೊಲಿದಿಹೆನು
ನಾ ನಿನ್ನ ತಂಗಿ ; ನೀನೆನ್ನ ಸೋದರನು.

ಶಿವಯ್ಯ— ಬಸವಯ್ಯನನು ನೀನೆಂತು ಒಲಿದಿರುವೆಯೋ
ಅಂತೆನ್ನನೊಲಿದಿರುವೆಯಾ, ಹೇಳು ?

ರುದ್ರಾಂಬೆ— ಶಿವಯ್ಯ,
ಅದನೊಂದನುಳಿದು ಇನ್ನೇನನಾದರೂ ಕೇಳು.

ಶಿವಯ್ಯ— ಅದಾಗದು, ರುದ್ರಾಂಬೆ. ನಿನ್ನ ನಾನೆಂತು
ಪ್ರೀತಿಸುವೆನೆಂಬುದನು ನೀನರಿಯೆ.

ರುದ್ರಾಂಬೆ— ನಾ ಬಲ್ಲೆ.
ಆದರೂ ಒಮ್ಮೆಯೊಂದೆಡೆ ಮುಂಡಿಸಿದ ಒಲ್ಮೆ
ಎಂತು ಮತ್ತೊಂದೆಡೆಗೆ ನೆಲಸುವುದು ?

ಶಿವಯ್ಯ— ರುದ್ರಾಂಬೆ
ದುಂಬಿ ಹಲವು ಹೂಗಳ ನೋಡಿ ತುದಿಯಲ್ಲಿ
ತನಗೆ ಬೇಕಾದುದನು ಒಲಿಯುವುದು. ಅಂತೆಯೇ
ಹಲವೆಡೆಗಳಲ್ಲಿ ಸಂಚರಿಸುವಾ ಪ್ರೇಮಕ್ಕೆ

ದೋಷವೆಂಬುವುದಿಲ್ಲ.—ಅದಂತಿರಲಿ,
ನಿನ್ನ ತಂದೆಯು ಜೀವವುಳಿಯಬೇಕಾದರೆ
ನನ್ನನೊಲಿಯಲು ಒಪ್ಪು. ಇಲ್ಲದಿರೆ ಇಂದೋ
ನಾಳೆಯೋ ಅವರಿಬ್ಬರೂ ನಿನಗೆ ಎಂದಿಗೂ
ದೊರೆಯದಂತಾಗುವರು !

ರುದ್ರಾಂಬೆ (ಸ್ವಗತ)— ಈ ಪಾಪಿ ಇದಕಾಗಿಯೆ
ಇಲ್ಲಿಗೈತಂದಿಹನು. ಇವನ ದೌರಾತ್ಮ್ಯಕ್ಕೆ
ತಕ್ಕುದನೆ ಮಾಡುವೆನು. ಬಾಂಧವರ ಜೀವವನು
ಉಳಿಸಿಕೊಳ್ಳುವ ಸುಳ್ಳು ಪಾಪವಾಗದು. ಇರಲಿ.—
(ಬಹಿರಂಗ) ಶಿವಯ್ಯ, ಬಸವಯ್ಯನ ಅಕುಟಿಲ ಪ್ರೇಮಕ್ಕೆ
ಅಪರಾಧವೆಸಗದಂತಾಗುವುದು !

ಶಿವಯ್ಯ— ನನ್ನದೂ
ಅಕುಟಿಲ ಪ್ರೇಮವೇ, ರುದ್ರಾಂಬೆ. ಅಲ್ಲದೆಯೆ
ತನ್ನನೇ ತಾನು ಹೊರೆದುಕೊಳಲಾರದಿಹ
ಆತನಿಗೆ ನೀನೇಕೆ? ನಿನ್ನ ಒಲವೇಕೆ?—
ನೀನವನನೊಲಿದೆಯಾದರೆ ನಿನಗೆ ಆತನೂ
ದೊರಕದೆಯೆ ಮಡಿಯುವನು; ಅವನ ದೆಸೆಯಿಂದೆ
ಮುದುಕನಾಗಿಹ ನಿನ್ನ ಪಿತನ ಶಿರವೂ ಕೊಲೆಗೆ
ಬೀಳುವುದು. ನೀನೆನ್ನನೊಲಿದೆಯಾದರೆ ನಿನ್ನ
ಅಕ್ಕರೆಯ ತಂದೆಯೂ ಬದುಕುವನು; ಅದರಿಂದೆ
ಆ ಬಡವ ಬಸವಯ್ಯನೂ ಉಳಿಯುವಂತಹುದು.
ನಾ ನಿನ್ನನೊಲಿದಂತೆ ಬಸವಯ್ಯನೊಲಿದಿಲ್ಲ.
ನಿನಗಾಗಿ ಏನು ಸಾಹಸವ ಬೇಕಾದರೂ
ಮಾಡಿ ಬಾಳನೆ ಬೇಳಲಾನೆಂದೂ ಸಿದ್ಧನಿಹೆ.
ನನ್ನೊಲ್ಮೆಯಲಿ ನಿನಗೆ ಲಾಭವಿದೆ; ಕ್ಷೇಮವಿದೆ;
ಪ್ರೇಮವಿದೆ. ಸರಿ ವಿಚಾರಿಸಿ ನೋಡು.

ರುದ್ರಾಂಬೆ (ಚಿಂತಿಸುವಳಂತೆ ಮಾಡಿ)— ಆಗಲಿ
ನಿನ್ನಾಸೆಯಂತೆಯೇ ನಡೆಯುವೆನು. ಸೆರೆಯಿಂದೆ
ಎಂತಾದರೂ ಅವರನಿಬ್ಬರನು ಹೊರಗೆಡಹು.

ಶಿವಯ್ಯ (ಹಿಗ್ಗಿ)—ಹಾಗಾದರಿಂದಿನಿರುಳೇ ಅವರನುಳಿಸುವೆನು.—
ನನಗಿಂದು ನನ್ನ ಬಾಳಿನ ಸಾರ್ಥಕತೆಯಾಯ್ತು !

ಓ ನನ್ನ ರುದ್ರಾಂಬೆ, ನೀನಿಂದು ಶಿವಯ್ಯನನು
ಅಮರನನ್ನಾಗಿ ಮಾಡಿರುವೆ. ಇಂದು ನನ್ನೆದೆಯಲ್ಲಿ
ಎಂದಿಗೂ ತವಿಯದಿಹ ಸಾಹಸವು ಮೂಡಿಹುದು.
ನಿನಗಾಗಿ ನಾನಿಂದು ಯಮನ ಕೆಣಕುತಿಹೆನೆಂದು
ನಾ ಬಲ್ಲೆ. ಆದರೂ, ಈ ಯತ್ನದಲಿ ನಾನು
ಮಡಿದರೂ, ನಿನ್ನನೆಂದಾದರೂ ಒಂದು ದಿನ
ಪಡೆವೆನೆಂಬುವ ತೃಪ್ತಿಯೇ ನನಗೆ ನೀನಿಂದೆ
ಕೈಗೂಡಿದಂತೆಯೇ ಆಗಿಹುದು. ನಿನ್ನೊಲ್ಮೆ
ದೊರಕಿದುದೆ ನನ್ನೆಲ್ಲ ಸಾಧನೆಗೆ ಸಿದ್ಧಿಯಾಯ್ತು!
ನೂರಾರು ಜನ್ಮಗಳನೆತ್ತುವೆನು ನಿನಗಾಗಿ;
ನೂರಾರು ನರಕಗಳನಾದರೂ ಈಜುವೆನು
ನಿನಗಾಗಿ. ನಿನ್ನೊಲ್ಮೆಯೆದುರಿನಲಿ ಈ ನನ್ನ
ಕಾಯವೂ ತೃಣಕೆ ಎಣೆ! (ಬಾಗಿಲಲಿ ಸದ್ದು)

ರುದ್ರಾಂಬೆ— ಯಾರದು?

(ಬಾಗಿಲು ತೆರೆದು ಹೊನ್ನಯ್ಯ ಬರಲು)

ಹೊನ್ನಯ್ಯ, ಸುದ್ದಿಯೇನು?

ಶಿವಯ್ಯ— ಬಾ, ಹೊನ್ನಯ್ಯ, ಏನಾಯ್ತು?

ಹೊನ್ನಯ್ಯ—ಸರ್ವನಾಶ! ಇಬ್ಬರನೂ ಸೆರೆಗೊಯ್ದರು. ಅವರು ಕೊಲೆಯಾಗುವರೆಂಬ ಸುದ್ದಿ ಊರೊಳಗೆಲ್ಲ ಹಬ್ಬಿದೆ! ಮುಂದೇನು ಗತಿ?

ಶಿವಯ್ಯ—ಚಿಂತೆಯಿಲ್ಲ, ಹೊನ್ನಯ್ಯ. ನೀನು ನನಗೆ ನೆರವಾಗಲೊಪ್ಪಿದರೆ ಈ ರಾತ್ರಿಯೆ ಅವರನಲ್ಲಿಂದ ಸಾಗಿಸಬಹುದು.

ರುದ್ರಾಂಬೆ (ಹೊನ್ನಯ್ಯಗೆ)—ನನ್ನಲ್ಲಿ ಕರುಣೆಯಿಡು! ಶಿವಯ್ಯನಿಗೆ ನೆರವಾಗು!

ಹೊನ್ನಯ್ಯ—ತಂಗಿ, ಈ ಕಷ್ಟ ನಿನ್ನದಲ್ಲ, ನನ್ನದು. ನನ್ನ ಜೀವವನೆ ತೆತ್ತು ಪ್ರಯತ್ನ ಮಾಡುತ್ತೇನೆ. (ಶಿವಯ್ಯಗೆ) ನಾನು ಸಿದ್ಧನಿದ್ದೇನೆ. ಉಪಾಯವೇನು, ಹೇಳು?

ಶಿವಯ್ಯ—ಈವೂರಿನಲ್ಲಿ ಸಂನ್ಯಾಸಿಯೊಬ್ಬನಿದ್ದಾನೆ.

ಹೊನ್ನಯ್ಯ—ಹೌದು.

ಶಿವಯ್ಯ—ಆತನಿಗೆ ಅರಮನೆಯ ಸೇವಕರು, ಕಾವಲುಗಾರರು, ಎಲ್ಲರೂ ಪರಿಚಯ.

ಹೊನ್ನಯ್ಯ—ಆದರೆ?

ಶಿವಯ್ಯ—ಸೆರೆಮನೆಯ ಕಾವಲುಗಾರ ಸಿಂಗಣ್ಣನಿಗೆ ಅವನಲ್ಲಿ ಬಹಳ ಭಕ್ತಿ.— ಇರಲಿ, ಅದೆಲ್ಲ ನಿನಗೇಕೆ? ನೀನು ನಡುರಾತ್ರಿಯ ಹೊತ್ತಿಗೆ ಸೆರೆಮನೆಯ

ಬಳಿಗೆ ಬಾ. ನಾನಷ್ಟರಲ್ಲಿಯೆ ಎಲ್ಲವನೂ ಸಿದ್ಧಮಾಡುತ್ತೇನೆ. (ರುದ್ರಾಂಬೆಗೆ) ನಾವು ಅವರನು ಸಾಗಿಸಿದ ತರುವಾಯ ನಿನಗೇನಾದರೂ ಕೇಡಾಗಬಹುದು. ನ್ಯೈಮರಸಿಕೊಳ್ಳಲು ಸಿದ್ಧಳಾಗಿರಬೇಕು.

ರುದ್ರಾಂಬೆ—ನನ್ನ ಕ್ಷೇಮದ ಚಿಂತೆ ನಿಮಗೆ ಬೇಡ. ಹೇಗಾದರೂ ಅವರನಲ್ಲಿಂದ ಬಿಡಿಸಿ.

**ಶಿವಯ್ಯ**—ಹೊನ್ನಯ್ಯ, ಈಗ ನನ್ನ ಜೊತೆ ಬಾ. ಮಾಡಬೇಕಾದ ಸನ್ನಾಹಗಳಿವೆ. ತಡಮಾಡಬಾರದು. (ರುದ್ರಾಂಬೆಗೆ) ಹೋಗಿಬರುತ್ತೇನೆ, ರುದ್ರಾಂಬೆ.

ಹೊನ್ನಯ್ಯ—ಧೈರ್ಯದಿಂದಿರು, ತಂಗಿ. ಈಶ್ವರನ ದಯೆಯಿರಲು
ಎಲ್ಲ ಮಂಗಳವಹುದು. ಈ ದುಃಖಮಾಲೆಗಳು
ಸುಖಕೆ ಸೋಪಾನಗಳು. ಜಗದೀಶ್ವರನ ಕೃಪೆಗೆ
ನೂರು ಮಾರ್ಗಗಳಿಹವು; ನೂರು ವೇಷಗಳಿಹವು.
ಸುಖವೆಂಬುದಾತನೊಲ್ಮೆಗೆ ಚಿಹ್ನೆಯಾಗುವೊಡೆ
ದುಃಖವೂ ಅಂತೆಯೇ ಎಂದರಿಯುವುದು, ತಂಗಿ!
ಅದರಿಂದೆ ಕಾರುಣಿಕ ಈಶ್ವರನ ಕಾರ್ಯದಲಿ
ಶ್ರೇಯಸ್ಸೆ ತುದಿಯ ಗುರಿ ಎಂಬುದನು ನಂಬಿ
ನೆಚ್ಚುಗೆಡದಿರು. ಎಲ್ಲ ಮಂಗಳವಾಗುವುದು!

ರುದ್ರಾಂಬೆ—ಈಶ್ವರನು ನಮಗೆಲ್ಲ ನೆರವಾಗಲಿ!

(ಶಿವಯ್ಯ ಹೊನ್ನಯ್ಯ ಹೋಗುವರು. ರುದ್ರಾಂಬೆ ಅವರನ್ನೆ ನೋಡುತ್ತ ನಿಲ್ಲುತ್ತಾಳೆ.)

[ಪರದೆ ಬೀಳುವುದು.]

## ದೃಶ್ಯ ೩

(ಬಿದನೂರಿನ ಅನ್ನಸತ್ರದಲ್ಲಿ. ಸಂನ್ಯಾಸಿ ಮೃಗಚರ್ಮದ ಮೇಲೆ ಕುಳಿತಿದ್ದಾನೆ. ಶಿವಯ್ಯನು ಬೀಳ್ಕೊಳ್ಳುತ್ತಿದ್ದಾನೆ.)

ಶಿವಯ್ಯ—ಹಾಗಾದರೆ ನಾನೀಗ ಹೋಗುತ್ತೇನೆ. ನಿಮ್ಮ ಸಂಕೇತವೇನು?

ಸಂನ್ಯಾಸಿ—ನೀವು ದೂರದಲ್ಲಿ ಶಸ್ತ್ರಸಜ್ಜಿತರಾಗಿ ಅಡಗಿಕೊಂಡಿರಿ. ನಾನು ಸಿಳ್ಳು ಹಾಕುತ್ತೇನೆ.

ಶಿವಯ್ಯ—ತಮ್ಮಿಂದ ಬಹಳ ಉಪಕಾರವಾಗಿದೆ. ನಮಸ್ಕಾರ.

(ಶಿವಯ್ಯ ನಮಸ್ಕಾರಮಾಡಲು ಸಂನ್ಯಾಸಿ 'ಶಿವ! ಶಿವ!' ಎಂದು ಹರಸುವನು. ತರುವಾಯ ಶಿವಯ್ಯ ಹೋಗುವನು. ಸಂನ್ಯಾಸಿ ಚಿಂತಾಮಗ್ನನಾಗಿ ದಿಗಂತವನ್ನೇ ನೋಡುತ್ತ ಬಿಸುಸುಯ್ಯುವನು.)

ಸಂನ್ಯಾಸಿ— ಏನು ಸೌಂದರ್ಯವನು ಸೂಸಿ ಮುಳುಗುತ್ತಿಹನು
ದಿನಮಣಿಯು ಪಶ್ಚಿಮ ದಿಗಂತದಲಿ! ಬನಗಳೀ
ಹಸುರಿನಲಿ ಜೈಗುಗೆಂಪಿನ ಹೊನ್ನು ಹರಿಯುತಿದೆ!
ಆಹಾ, ಈ ಪ್ರಕೃತಿಯೌದಾರ್ಯದೆದುರಿನಲಿ
ಮಾನವನ ನೀಚ ಕೃಪಣತೆ ಎನಿತು ಹೀನವಾಗಿ
ತೋರುವುದು! ಬೇಹಿನವನಾದರೂ ನಾನು, ಈ
ವೇಷದ ಮಹಿಮೆಯಿಂದಲೇ ಇದರ ಆವೇಶವೂ
ನನ್ನಲ್ಲಿ ಮೂಡುತಿದೆ; ಸಾಧುಗಳಲುದಯಿಸುವ
ಶಾಂತಿ ಎನ್ನೆದೆಯಲ್ಲಿ ತಲೆದೋರುತಿದೆ. ಆಹಾ!
ಮಹಿಮೆಯನು ನಟಿಸಿದರೂ ಸಾಕಲ್ಲವೇ ನಮ್ಮ
ಹೃದಯದಲಿ ಮೈಮೆ ಮೈದೋರಿಯೇ ತೋರುವುದು.

(ಧ್ಯಾನಮಗ್ನನಾಗಿ ಕೂರುವನು. ಒಬ್ಬಿಬ್ಬರು ಬಂದು ನಮಸ್ಕಾರಮಾಡಿ ಪಿಸುಮಾತಾಡುತ್ತಾ ಹೋಗುವರು.)

ಒಂದನೆ—ಏನು ಯೋಗವಿದು?

ಎರಡನೆ—ಮಹಾತಪಸ್ವಿಗಳು! ಸಮಾಧಿಯಲ್ಲಿದ್ದಾರೆ!

ಒಂದನೆ—ನಾವೇ ಧನ್ಯರು! ಸಾಕ್ಷಾತ್ ಪರಮೇಶ್ವರನಿಗೆ ನಮಸ್ಕಾರ ಮಾಡಿ ದಂತಾಯ್ತು!

ಎರಡನೆ—ಬಾ ಹೋಗೋಣ. ಅವರ ಧ್ಯಾನಕ್ಕೆ ಭಂಗವಾದೀತು. ಅರ್ಧ ಧ್ಯಾನ ದಲ್ಲಿ ಕಣ್ಣು ತೆರೆದರೆ ಲೋಕವೇ ಭಸ್ಮವಾದೀತು!

(ಒಬ್ಬನು ಒಬ್ಬನನ್ನು ಎಳೆದುಕೊಂಡು ಹೋಗುವನು. ತಿಮ್ಮಜಟ್ಟಿ ಅರೆಮರುಳು ಹಿಡಿದವ ನಂತೆ ಬರುವನು. ನಮಸ್ಕಾರಮಾಡಿ ಕೂತುಕೊಳ್ಳುವನು.)

ತಿಮ್ಮಜಟ್ಟಿ (ಸ್ವಗತ)—ಕೆಟ್ಟ ಕೆಲಸಕ್ಕೆ ಕಾಲಿಟ್ಟರಾಯಿತು, ಕೆಸರಿನಲ್ಲಿ ಕಾಲಿಟ್ಟಂತೆ! ಮೊದಲು ಕಾಲು ಹೂತುಕೊಳ್ಳುವುದು. ಒದ್ದಾಡಿದರೆ ಸೊಂಟದವರೆಗೂ ಮುಳುಗುವುದು. ಕಡೆಗೆ ಎದೆಯವರೆಗೆ! ಕಡೆಗೆ ಕುತ್ತಿಗೆ!—ನನಗೀಗ ಕುತ್ತಿಗೆಯ ವರೆಗೆ ಬಂದಿದೆ. ಶಿವನೇ, ನನ್ನನು ಹೇಗಾದರೂ ಹೊರಗೆಳೆಯ ಲಾರೆಯಾ?—ಆಳಿದ ಮಹಾಸ್ವಾಮಿಯವರಿಗೆ ವಿಷಹಾಕಿ ಕೊಂದೆ! ಇನ್ನು— ಅವರ ಮಕ್ಕಳನ್ನೂ ಮಂತ್ರಿಗಳನ್ನೂ ಕತ್ತು ಮುರಿಯಬೇಕಂತೆ! ಇಲ್ಲದಿದ್ದರೆ ನನ್ನ ಕುತ್ತಿಗೆಯೇ ಹಾರುವುದಂತೆ! ವಿಷಕೊಟ್ಟು ಕೊಂದೇ ನನಗೆ ಜೀವನವೇ ರೇಜಿಗೆಯಾಗಿದೆ! ಮೈಗೆ ಶನಿಬಿದ್ದಂತಿದೆ! ಇನ್ನು ಕತ್ತುಮುರಿದು ಕೊಂದರೆ ನನ್ನ ಗತಿಯೇನು?—ಅಯ್ಯೋ ಇದಕಾಗಿಯೇ ಪಡೆದೆನೇ ಈ ಹಾಳು

ಆನೆಯಂತಹ ದೇಹವನ್ನು ? ಹಣದಾಸೆಗೆ ಯಾರಾಗಲಿ ಬಿಷ್ಟೆಂದು ತಾನೆ ಅನ್ಯಾಯಮಾಡಿಯಾರು ? ಅದೂ ಹೋಗಲಿ ; ಅನ್ಯಾಯಕ್ಕೆ ಮೇರೆ ಯಿಲ್ಲವೆ ?—ಹಣದಾಸೆ ತೋರಿದರೆ ಪ್ರಯೋಜನವಿಲ್ಲವೆಂದು ಪ್ರಾಣಭಯ ವನ್ನು ಬೇರೆ ತಂದೊಡ್ಡಿದ್ದಾರೆ ! ನಾನೇನು ಸಾಯಲಿ !

(ಜಟ್ಟಿ ಏನನ್ನೋ ಎವೆಯಿಕ್ಕದೆ ನೋಡುತ್ತ ಕುಳಿತಿರುವನು. ಸಂನ್ಯಾಸಿ ಕಣ್ಣು ತೆರೆದು ಕರೆಯುವನು )

ಸಂನ್ಯಾಸಿ—ತಿಮ್ಮ ಜಟ್ಟಿ !

ತಿಮ್ಮಜಟ್ಟಿ (ಬೆಚ್ಚಿಬಿದ್ದು)—ಅಯ್ಯೋ (ಎಂದು ಚೀರುವನು.)

ಸಂನ್ಯಾಸಿ—ಏನಿದು, ಜಟ್ಟಿ ?

ತಿಮ್ಮಜಟ್ಟಿ—ಸ್ವಾಮಿ, ನಾನು ಸಾಯುತ್ತಿದ್ದೇನೆ !

ಸಂನ್ಯಾಸಿ—ಏನು ನೀನು ಹೇಳುವುದು ! ಅದೇಕೆ ಬೆಚ್ಚಿಬಿದ್ದು ಕೂಗಿಕೊಂಡೆ ?

ತಿಮ್ಮಜಟ್ಟಿ—ಗುರುವೇ, ನನಗೆ ಕೇಡುಗಾಲ ಬಂದಿದೆ. ಹೇಗಾದರೂ ಮಾಡಿ ನನ್ನನ್ನುಳಿಸಿ.

ಸಂನ್ಯಾಸಿ—ಏನಾಗಿದೆಯೋ ನಿನಗೆ ?

ತಿಮ್ಮಜಟ್ಟಿ—ನಾನೇನು ಹೇಳಲಿ ? ಏನಾಗಿಲ್ಲ ನನಗೆ ? ಆಗಬೇಕಾದ್ದೆಲ್ಲ ಆಗಿದೆ, ಒಂದುಳಿದಿದೆ !

ಸಂನ್ಯಾಸಿ—ಹಾಗೆಂದರೆ ?

ತಿಮ್ಮಜಟ್ಟಿ—ಹುಟ್ಟಿದ್ದಾಗಿದೆ ! ಬೆಳೆದದ್ದಾಗಿದೆ ! ಮದುವೆಯಾಗಿದೆ ! ಮಕ್ಕಳೂ ಆಗಿದೆ ! ಕೊಲೆಯನ್ನೂ ಮಾಡಿಯಾಗಿದೆ ! ಮರುಳೂ ಹಿಡಿದಾಗಿದೆ ! ಇನ್ನು ಮಣ್ಣಾಗುವುದೊಂದು ಉಳಿದಿದೆ ! (ಅಡ್ಡಬಿದ್ದು) ಹೇಗಾದರೂ ನನ್ನನ್ನು ಕಾಪಾಡಬೇಕು !

ಸಂನ್ಯಾಸಿ (ಕರುಣೆಯಿಂದ)—ಜಟ್ಟಿ, ಹೆದರಬೇಡ ; ಏಳು. ಮಾಡಿದ ಪಾಪವನು ಮುಂದೆ ಮಾಡುವ ಪುಣ್ಯದಿಂದ ಪರಿಹರಿಸಿಕೊಳ್ಳಬಹುದು.

ತಿಮ್ಮಜಟ್ಟಿ—ಅಯ್ಯೋ ಸ್ವಾಮೀ, ಕೊಲೆಗೆ ಯಾವ ಪ್ರಾಯಶ್ಚಿತ್ತವಿದೆ ? ಕೊಲೆ ಯಾಗುವುದೊಂದೇ !

ಸಂನ್ಯಾಸಿ—ಅಲ್ಲ ; ಕೊಲೆಯಾಗುವವರನು ಕಾಪಾಡುವುದು.

ತಿಮ್ಮಜಟ್ಟಿ—ಕಾಪಾಡುವುದೆಲ್ಲಿ ಬಂತು, ಸ್ವಾಮೀ ? ಮತ್ತಿಬ್ಬರನೂ ಕೊಲೆ ಮಾಡಬೇಕಂತೆ !

ಸಂನ್ಯಾಸಿ—ಏನು ? ಯಾರನ್ನು ?

ತಿಮ್ಮಜಟ್ಟಿ—ತಾವು ಕೇಳಬಾರದು !

ಸಂನ್ಯಾಸಿ—ಚಿಂತೆಯಿಲ್ಲ, ಹೇಳು.

ತಿಮ್ಮಜಟ್ಟಿ—ಅರಸುಮಕ್ಕಳನ್ನೂ ಲಿಂಗಣ್ಣ ಮಂತ್ರಿಗಳನ್ನೂ! ಮಗುವಿನಂತಹ ಮನಸ್ಸು ಬಸಯ್ಯನವರದ್ದು! ಹಸುವಿನಂತಹ ಮನುಷ್ಯರು ಲಿಂಗಣ್ಣ ಮಂತ್ರಿಗಳು! ಅವರನ್ನು ನಾನು ಹೇಗೆ ಕೊಲೆಮಾಡಲಿ?—ಶಿವ ಶಿವಾ! ಗುರುಗಳೇ, ನಾನೇನೋ ಬದುಕುವುದಿಲ್ಲ!

ಸಂನ್ಯಾಸಿ—ಇಲ್ಲ; ನೀನು ಬದುಕಬಹುದು!

ತಿಮ್ಮಜಟ್ಟಿ—ಏನೋ ಆ ಶಿವನೇ ಬಲ್ಲ!

ಸಂನ್ಯಾಸಿ—ಯಾವತ್ತು ಕೊಲ್ಲಬೇಕಂತೆ?

ತಿಮ್ಮಜಟ್ಟಿ—ಇವತ್ತು ರಾತ್ರಿಯೇ, ಯಾರಿಗೂ ತಿಳಿಯದಂತೆ!

ಸಂನ್ಯಾಸಿ—ನೀನೊಂದುಪಕಾರಮಾಡಿದರೆ ನೀನೂ ಬದುಕುವೆ!

ತಿಮ್ಮಜಟ್ಟಿ—ಹೇಳಿ. ಏನು ಬೇಕಾದರೂ ಮಾಡುತ್ತೇನೆ!

ಸಂನ್ಯಾಸಿ—ಇವತ್ತು ರಾತ್ರಿ ಏನಾದರೂ ಮಾಡಿ ಕೊಲೆಯಾಗುವುದನು ತಡೆಯಬಲ್ಲೆಯಾ?

ತಿಮ್ಮಜಟ್ಟಿ—ನಾನು ಅಲ್ಲಿಗೆ ಹೋಗುವುದೇ ಇಲ್ಲ.

ಸಂನ್ಯಾಸಿ—ಇನ್ನಾರಾದರೂ ಹೋಗುವರೇನು?

ತಿಮ್ಮಜಟ್ಟಿ—ಹೌದು, ಒಂದು ಗುಂಪೇ ಸಿದ್ಧವಾಗಿದೆ!

ಸಂನ್ಯಾಸಿ—ಹಾಗಾದರೆ ನೀನು ತಪ್ಪಿಸಿಕೊಂಡರೆ ನಿನಗೂ ಕೇಡು; ಬಸವಯ್ಯ ಲಿಂಗಣ್ಣರಿಗೂ ಕೇಡು!

ತಿಮ್ಮಜಟ್ಟಿ—ಮತ್ತೇನು ಮಾಡಲಿ ನಾನು? ನೀವೇ ಹೇಳಿ! ಅಯ್ಯೋ ಈ ಜಗತ್ತಿನಲ್ಲಾಗುವ ಅನ್ಯಾಯಕ್ಕೆಲ್ಲ ನಾನೊಬ್ಬನೇ ಹೊಣೆಯಾಗುವಂತೆ ತೋರುತ್ತಿದೆ!

ಸಂನ್ಯಾಸಿ—ಕೊಲೆಗಾರರನು ತಡಮಾಡಿ ಕರೆದುಕೊಂಡು ಬರಬೇಕು.

ತಿಮ್ಮಜಟ್ಟಿ—ಆಗಲಿ ಪ್ರಯತ್ನ ಮಾಡುತ್ತೇನೆ!—ಅವರೆಲ್ಲ ಹೊಸಬರು, ಸ್ವಾಮಿ. ಅವರಿಗಿನ್ನೂ ರಕ್ತದ ರುಚಿ ಗೊತ್ತಿಲ್ಲ!

ಸಂನ್ಯಾಸಿ—ಪ್ರಯತ್ನ ಮಾಡುತ್ತೇನೆ ಎಂದರಾಗದು. ನೀನು ತಪ್ಪಿದರೆ ಸರ್ವನಾಶವಾಗುತ್ತದೆ. ಇಲ್ಲದಿರೆ ನೀನೂ ಬದುಕುವೆ; ಅವರಿಗೂ ಕ್ಷೇಮವಾಗುವುದು.

ತಿಮ್ಮಜಟ್ಟಿ—ಆಗಲಿ, ಹೇಗಾದರೂ ಮಾಡುತ್ತೇನೆ.

ಸಂನ್ಯಾಸಿ—ಸೆರೆಮನೆಗೆ ಬರುವಾಗ ನೀನು ಗಟ್ಟಿಯಾಗಿ ಕೆಮ್ಮುತ್ತ ಬರಬೇಕು. ಇಗೋ, ನಿನ್ನ ಜೊತೆಯವರಿಗೆಲ್ಲ ಇದನ್ನು ಎಲೆಯಡಕೆಗೆ ಹಚ್ಚಿಕೊಟ್ಟರೆ ನಿನ್ನ ಕಾರ್ಯ ಸುಲಭವಾಗಿ ಕೈಗೂಡುವುದು. (ಮದ್ದನ್ನು ಕೊಡುವನು.) ನಾಳೆ ನನ್ನನ್ನು ಬಂದು ಕಾಣು. ಮುಂದಿನ ದಾರಿ ಹೇಳಿಕೊಡುವೆನು.

ತಿಮ್ಮಜಟ್ಟಿ—ಅಪ್ಪಣೆ! ಹೋಗಿಬರುತ್ತೇನೆ, ಆಶೀರ್ವಾದ ಮಾಡಬೇಕು! (ನಮಸ್ಕಾರ ಮಾಡುವನು. ಸಂನ್ಯಾಸಿ ಆಶೀರ್ವದಿಸುವನು.) ಮಹಾಸ್ವಾಮಿ, ನನಗೀಗಾಗಲೇ ಹೃದಯ ಹಗುರವಾಗುತ್ತಿದೆ! (ಹೋಗುವನು.)

ಸಂನ್ಯಾಸಿ— ಹಾಗಲ್ಲದಿನ್ನೇನು ಸತ್ಪಥದ ಮಹಿಮೆಯದು!
ಪಾಪಪಥವನು ತ್ಯಜಿಸೆ ಪುಣ್ಯವೆ ದೊರಕಿದಂತೆ
ಸಂತೋಷ ಜನಿಸುವುದು. ಧರ್ಮಪಥಗಮನದಲಿ
ಆಹ್ಲಾದವೇತಕೋ ಅದನರಿಯೆ ತತ್ತ್ವಗಳು
ಹೆಣಗುತಿವೆ. ಆದರೂ ತನ್ನ ಅನುಭವದಿಂದೆ
ಮಾನವನ ಹೃದಯವಾ ತತ್ತ್ವವನು ಸವಿದಿಹುದು.
ದಿವ್ಯ ಧರ್ಮಕ್ಕಾಗಿ ಎನಿತು ಜನ ಮಾನವರು
ಮುಗುಳುನಗೆಯನು ಬೀರಿ ಬೆಂಕಿಯಲಿ ಮುಳುಗಿದರು!
ಮೋಣೆಸಿಬರೋ ಶೂಲಕೇರಿದರು! ಧರ್ಮವೇ
ದೇವರೋ? ಧರ್ಮವೆಂಬುದು ಅವನ ನಿಯಮಮಯ
ಚಿತ್ತಸ್ವರೂಪವೋ? ಏನಾದರಾಗಿರಲಿ,
ಧರ್ಮಸುಖವೆಂಬುದೇ ಪರಮೇಶನಿಗೆ ಸಾಕ್ಷಿ!

(ಒಂದು ತಾಳೆಯೋಲೆಯ ಗ್ರಂಥವನ್ನು ತೆಗೆದುಕೊಂಡು ಮನದಲ್ಲಿಯೇ ಓದಲು ತೊಡಗುವನು.)

[ಪರದೆ ಬೀಳುವುದು.]

## ದೃಶ್ಯ ೩

(ರಾತ್ರಿ. ಸೆರೆಮನೆಯ ಮುಂದೆ ಕಾವಲುಗಾರ ಸಿಂಗಣ್ಣ ತಿರುಗುತ್ತಿದ್ದಾನೆ.)

ಸಿಂಗಣ್ಣ (ಆಕಳಿಸುವನು.)—ಒಳಗಿರುವುದಕಿಂತಲೂ ಹೊರಗಿರುವುದೇ ದೊಡ್ಡ ಸೆರೆ! ಅವರಿಗಿಂತಲೂ ನಾನೇ ದೊಡ್ಡ ಕೈದಿ! ಹಗಲು ಹೊಟ್ಟೆ ತುಂಬಾ ಊಟ ಮಾಡುತ್ತಾರೆ; ಇರುಳು ಕಣ್ಣುತುಂಬ ನಿದ್ದೆಮಾಡುತ್ತಾರೆ. ನಾನೋ ನಿದ್ದೆಯಿಲ್ಲದೆ ಹಿಂದೆ ಮುಂದೆ ತಿರುಗಿ ತಿರುಗಿ ಸಾಯಬೇಕು. ಹಾಳು ಕಾವಲುಗಾರಿಕೆ! ಕಾವಲುಗಾರನಿಗೆ ಇರುವ ಶಿಕ್ಷೆ ಕೈದಿಗಳಿಗಿಲ್ಲ! (ತಿರುಗಾಡುವನು; ಸೀನುವನು.) ಏನು ಮಂದಿಯೋ ಏನೋ! ಬಂದೇ ಬರುತ್ತಾರೆ! ಬಂದೇ ಬರುತ್ತಾರೆ! ಹಿಂದೆ ಮುಂದೆಯಾಗಿ ಬರುತ್ತಾರೆ ಅಳಿಯಂದಿರು ಬಂದಹಾಗೆ! ಇದೇನು ಮಾವನ ಮನೆಗೆ ಕಟ್ಟುಹೋಯ್ತೆ? ಸತ್ರ! ಕಳ್ಳರಿಗೆಲ್ಲ ಇದೊಂದು ಸತ್ರ! ಅದೂ ಸುಳ್ಳು! ನಿಜವಾದ ಕಳ್ಳರು ಸೆರೆಮನೆಗೆ ಬರುತ್ತಾರೆಯೆ! ಕದ್ದು ಸಿಕ್ಕಿಕೊಂಡು ಬೀಳುವರು ಕಳ್ಳರೇ ಅವರು? ಶುದ್ಧ ವೈಗಳ್ಳರು!—ರಾಜರ

ಅತಿಥಿಗಳು! ಹೆಸರಿಗೆ ಮಾತ್ರ ಸೆರೆಮನೆ! ಸೊಗಸು ನೋಡಿದರೆ ಅರಮನೆ ಗಿಂತಲೂ ಅರಮನೆ!—ನಾನೂ ಏನಾದರೂ ಮಾಡಿ ಒಳಗೆ ಹೋಗುವುದೇ ಲೇಸು! (ಸೀನುವನು) ಥೂ! ಇದೇನು ಸೀನುಗಳೋ ನಾನು ಬೇರೆ ಕಾಣೆ! (ಕೂತುಕೊಂಡು ಎಲೆಯಡಕೆ ಚೀಲವನು ಹೊರಗೆ ತೆಗದು) ಈ ಯುಗವೆಲ್ಲ ಬೆಳಗಾಗು ವುದಿಲ್ಲವೋ ಏನೋ ಈ ಹಾಳು ರಾತ್ರಿ! (ಎಲೆಯಡಕೆ ಹಾಕಿಕೊಳ್ಳುತ್ತಾ) ಒಂದಿಷ್ಟು ಬರಗೊಣ ಎಂದರೆ ಅವರು ಬೇರೆ ಬರುತ್ತಾರಂತೆ!—ಅಲ್ಲ! ಛೆ! ಏನು ಬಂತು ಕಲಿಕಾಲ! ನಿನ್ನೆ ಅರಸುಮಕ್ಕಳಾಗಿದ್ದವರು ಆ ಬಸವಯ್ಯ ಇವತ್ತು ಕೈದಿ! ಪಾಪ, ಆ ಲಿಂಗಣ್ಣ ಮಂತ್ರಿಗಳಿಗೇನು ಬಂತು! ದೇವ ರಂತಹ ಮದುಕರು!—ಎಲ್ಲಿಗೋ ಕರೆದುಕೊಂಡು ಹೋಗುತ್ತಾರಂತೆ ಇಬ್ಬರನ್ನೂ! ಎಲ್ಲಿಗೋ ಈ ರಾತ್ರಿ?—ಮತ್ತೆಲ್ಲಿಗೆ ಯಮಲೋಕಕ್ಕಿರಬೇಕು. (ಆಕಳಿಸುವನು.) ಸ್ವಲ್ಪ ಮೊದಲೇ ಬರಬಾರದೇ? ನನ್ನ ನ್ನೇಕೆ ಕಾಯಿಸಿ ಕಾಯಿಸಿ ಗೋಳುಹೊಯ್ಯುವರೋ ನಾ ಕಾಣೆ. ಅಲ್ಲ, ಸಾಯುವವರಿಗೆ ಒಂದು ಗಂಟೆ ಮೊದಲಾದರೇನು? ಒಂದು ಗಂಟೆ ತಡವಾದರೇನು?—ಒಂದು ಗಂಟೆ ಮೊದಲೇ ಹೋದರೆ ಪುಣ್ಯಕಟ್ಟಿಕೊಂಡು ಸ್ವರ್ಗಕ್ಕೆ ಹೋಗುತ್ತಾರೆ! ಅದೇನೋ ನಿಶ್ಚಯ: ಒಂದು ಗಂಟೆಯ ಹೊತ್ತೇ ಸಾಕು ಮನುಷ್ಯನಿಗೆ ನರಕ ಸಂಪಾದನೆಮಾಡುವುದಕ್ಕೆ! (ಸೀನುವನು.) ಥೂ! ಹಾಳು ಸೀನು! ಮೈಯೆಲ್ಲಾ ಎಂಜಲು! (ಎದ್ದು ತಿರುಗಾಡುವನು. ದೂರದಲ್ಲಿ ಯಾರನ್ನೋ ಕಂಡಂತೆ ನೋಡಿ ಗಟ್ಟಿಯಾಗಿ) ಯಾರಲ್ಲಿ? ಮಾತೇ ಇಲ್ಲ! ಇದೇನು ದೆವ್ವವೋ ಮನುಷ್ಯನೋ? ಈ ಹಾಳುರಾಜ್ಯ ದೆವ್ವಗಳಿಗೇ ತಿರುಗುವ ಬಯಲಾಗುವುದೋ ಏನೋ? (ಮತ್ತೂ ಗಟ್ಟಿಯಾಗಿ) ಯಾರಲ್ಲಿ?

(ಸಂನ್ಯಾಸಿ ಪ್ರವೇಶಿಸುತ್ತ)

ಸಂನ್ಯಾಸಿ—ನಾನು, ಸಿಂಗಣ್ಣಾ.

ಸಿಂಗಣ್ಣ (ಗುರುತಿಸಿ)—ಓಹೋ, ನೀವೇ? ಕೈಮುಗಿದೆ. (ಕೈಮುಗಿದು) ಇದೇನು ಇಷ್ಟು ಹೊತ್ತಿನಲ್ಲಿ ಸಂಚಾರ? ಎಲ್ಲಿಗೆ ದಯಮಾಡಿಸಿದ್ದರಿ?

ಸಂನ್ಯಾಸಿ—ಸರ್ವ ಭೂತಗಳಿಗೂ ಯಾವುದು ನಿಶೆಯೋ ಸಂಯಮಿಯಾದ ಯೋಗಿಗೆ ಅದೇ ಹಗಲಲ್ಲವೇ? ರಾತ್ರಿ; ಬೆಳ್ದಿಂಗಳು; ನಿರ್ಜನವಾಗಿದೆ; ನಿಃಶಬ್ದವಾಗಿದೆ! ಧ್ಯಾನಕ್ಕೆ ಹೋಗಿದ್ದೆ!

ಸಿಂಗಣ್ಣ—ಎಲ್ಲಿಗೆ?

ಸಂನ್ಯಾಸಿ—ಶ್ಮಶಾನಕ್ಕೆ!

ಸಿಂಗಣ್ಣ—ಅಯ್ಯೋ ಶ್ಮಶಾನಕ್ಕೆ ಯಾಕೆ, ಸ್ವಾಮೀ?

ಸಂನ್ಯಾಸಿ—ಧ್ಯಾನಕ್ಕೆ ಬಹಳ ಯೋಗ್ಯವಾದ ಸ್ಥಳವದು, ಸಿಂಗಣ್ಣ.

ಸಿಂಗಣ್ಣ— ಇರಲಿ. ಬನ್ನಿ, ಸ್ವಾಮಿ, ಕೂತುಕೊಳ್ಳಿ. ನನಗೂ ಒಬ್ಬನಿಗೇ ಬೇಸರಾಗಿತ್ತು. ತಾವು ಬಂದದ್ದು ದೇವರೇ ಬಂದಹಾಗಾಯ್ತು.

ಸಂನ್ಯಾಸಿ (ಮೇಲೆ ನೋಡಿ)— ಬಹಳ ಹೊತ್ತಾಗಿದೆ, ಸಿಂಗಣ್ಣ. ನಾನು ಹೋಗುತ್ತೇನೆ.

ಸಿಂಗಣ್ಣ—ಹೋಗಬಹುದಂತೆ, ಸ್ವಾಮೀ. ಸ್ವಲ್ಪ ವಿಶ್ರಮಿಸಿಕೊಂಡು ಹೋಗಿ.

ಸಂನ್ಯಾಸಿ—ಆಗಲಯ್ಯ ನಿನ್ನಿಷ್ಟ! ಶಿವ! ಶಿವ! ಶಿವ! (ಎನ್ನುತ್ತ ಕೂತುಕೊಳ್ಳುವನು. ಸಿಂಗಣ್ಣನೂ ಎದುರಾಗಿ ಕೂರುವನು.)

ಸಿಂಗಣ್ಣ—ದೇವರೂ, ನಿಮಗೆ ಶಿವ ಪ್ರತ್ಯಕ್ಷವಾಗಿದ್ದಾನಂತೆ, ಹೌದೆ?

ಸಂನ್ಯಾಸಿ—ಅದೆಲ್ಲ ನಿನಗೇಕಪ್ಪಾ? ಹಾಗೆಲ್ಲ ಹೇಳತಕ್ಕಂತಹ ವಿಷಯವಲ್ಲ ಅದು. ಕೇಳುವುದಕ್ಕೂ ಅಧಿಕಾರ ಬೇಕು.

ಸಿಂಗಣ್ಣ—ನನಗೇನು ಅಧಿಕಾರವಿಲ್ಲವೇ? ಸೆರೆಮನೆ ಕಾವಲುಗಾರ ನಾನು! ನೋಡಿ ಬೀಗದ ಕೈ!

ಸಂನ್ಯಾಸಿ—ಇರಬಹುದಯ್ಯಾ! ಆದರೆ ಇಂಥಾ ಅಧಿಕಾರವಲ್ಲ ನಾನು ಹೇಳಿದ್ದು. ಅದಕ್ಕೆ ಶಮದಮಾದಿ ಷಟ್‌ಸಂಪತ್ತಿಯಿರಬೇಕು. ಶ್ರವಣ, ಮನನ, ನಿಧಿಧ್ಯಾಸನ, ಧ್ಯಾನ, ಸಮಾಧಿಗಳಿರಬೇಕು. ಗುರೂಪದೇಶ ಬೇಕು. ಈಶ್ವರ ಕೃಪೆ ಬೇಕು.

ಸಿಂಗಣ್ಣ—ಹಾಗಾದರೆ ಅದು ನಮ್ಮಂತಹರಿಗೆ ಲಭ್ಯವಲ್ಲ.

ಸಂನ್ಯಾಸಿ—ಧ್ಯಾನಮಾಡಿದರೆ ನಿನಗೂ ಲಭಿಸಬಹುದು.

(ಸಂನ್ಯಾಸಿ ಜೋಳಿಗೆಯಿಂದ ಗುಳಿಗೆಯನ್ನು ತೆಗೆಯುವನು.)

ಸಿಂಗಣ್ಣ—ಅದೇನು, ಗುರುಗಳೆ?

ಸಂನ್ಯಾಸಿ (ತೋರಿಸುತ್ತ)—ಇದು ಬ್ರಹ್ಮಜ್ಞಾನಾಮೃತ ಮಾತ್ರೆ. ನಮ್ಮ ಗುರುಗಳು ದಯಪಾಲಿಸಿದ್ದು. ಇದರ ಮಹಿಮೆಯಿಂದಲೆ ನಾನೂ ಧ್ಯಾನಮಾಡಿ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡಿದ್ದೇನೆ. ಇತರರಿಗೂ ಮಾಡಿಸಿದ್ದೇನೆ.

ಸಿಂಗಣ್ಣ—ನನಗೂ ಕೃಪೆಮಾಡಬಾರದೇ, ದೇವರೂ?

ಸಂನ್ಯಾಸಿ—ನಿನಗೆ ನಿಜವಾಗಿಯೂ ಶಿವದರ್ಶನವಾಗಬೇಕೆಂದು ಮನಸ್ಸಿದೆಯೇ?

ಸಿಂಗಣ್ಣ—ಅಯ್ಯೋ ಸ್ವಾಮಿ, ಶಿವನನ್ನು ನೋಡಲು ಯಾರಿಗೆ ಮನಸ್ಸಿಲ್ಲ!

ಸಂನ್ಯಾಸಿ—ಹಾಗಾದರೆ ಇದನ್ನು ನುಂಗಿ ಪದ್ಮಾಸನ ಹಾಕಿಕೊಂಡು ಮೂಗಿನ ತುದಿಯನ್ನೇ ನೋಡುತ್ತ ಧ್ಯಾನಮಾಡಬೇಕು.

ಸಿಂಗಣ್ಣ—ನನ್ನ ಪುಣ್ಯವೆಂದೇ ಹೇಳಬೇಕು! (ಕೈ ನೀಡಲು)

ಸಂನ್ಯಾಸಿ—ಆತುರಪಡಬಾರದು. ತಿಂದರೆ ಏನಾಗುವುದೆಂದು ಹೇಳುತ್ತೇನೆ, ಕೇಳು.

ಮೊದಲು ಜಗತ್ತೆಲ್ಲವೂ ಮಂಕು ಕವಿದಂತಾಗುವುದು; ಎಲ್ಲವೂ ಕನಸಿನಂತೆ ಕಾಣುವುದು. ಆಗ ಇದೆಲ್ಲ ಮಾಯಾ ಪ್ರಪಂಚ ಎಂಬುದು ಚೆನ್ನಾಗಿ ಗೊತ್ತಾಗುವುದು. ತರುವಾಯ ನಿದ್ದೆ ಬಂದಂತಾಗುವುದು. ಆಮೇಲೆ ಜ್ಯೋತಿರ್ದರ್ಶನವಾಗುವುದು. ಆ ಜ್ಯೋತಿಯ ನಡುವೆ ಕೈಲಾಸ ಕಾಣಿಸುತ್ತದೆ ಅದನ್ನು ವರ್ಣಿಸಿ ಹೇಳಲು ನನ್ನಿಂದ ಅಸಾಧ್ಯ! ಸಾವಿರ ನಾಲಗೆಯ ಆದಿಶೇಷನಿಗೂ ಅಸಾಧ್ಯ! ಆದ್ದರಿಂದ ನೀನೆ ನೋಡಿ ತಿಳಿದುಕೋ. ತರುವಾಯ ಆ ರಜತಗಿರಿಯ ಶಿಖರವನ್ನು ಸರ್ವದಾ ಆಲಿಂಗಿಸಿ ಅಲಂಕರಿಸುವ ಶೈಲೋಪಮ ಸುನೀಲ ಜಲಧರಗಳ ಮಧ್ಯೆ ವಿದ್ಯುಲ್ಲತೆಗಳಿಂದ ಶೋಭಿತವಾದ ವಿವಿಧ ವೈಚಿತ್ರ್ಯಮಯ ರತ್ನಖಚಿತ ಸುವರ್ಣ ಸಿಂಹಾಸನದಲ್ಲಿ ಪಾರ್ವತೀ ಸಮೇತನಾಗಿ ತುಷಾರಮೂರ್ತಿಯಂತೆ ಶುಭ್ರಕಾಯನಾದ ಪರಶಿವನು ಪ್ರತ್ಯಕ್ಷನಾಗುತ್ತಾನೆ. (ಸಿಂಗಣ್ಣನಿಗೆ ಏನೂ ಅರ್ಥವಾಗದೆ ಬೆಪ್ಪುಮುಖ ಹಾಕಿಕೊಂಡಿರುವನು.) ಏನಿದು? ನೀನು ಈಗಲೆ ಭಯಪಟ್ಟಂತೆ ತೋರುತ್ತದೆ!

ಸಿಂಗಣ್ಣ—ಇಲ್ಲ, ಸ್ವಾಮಿ!

ಸಂನ್ಯಾಸಿ—ಮತ್ತೇಕೆ ಪೆಚ್ಚಾಗಿದ್ದೀಯೆ!

ಸಿಂಗಣ್ಣ—ನನಗೇನೂ ಅರ್ಥವಾಗಲಿಲ್ಲ!

ಸಂನ್ಯಾಸಿ—ಅರ್ಥವಾದರೇನು? ಆಗದಿದ್ದರೇನು? ಎಂತಿದ್ದರೂ ನೀನೆ ನೋಡುತ್ತೀಯಲ್ಲವೆ? ಅದು ಬರಿಯ ವರ್ಣನೆ!

ಸಿಂಗಣ್ಣ—ನಾನೂ ಶಿವನೊಡನೆ ಮಾತಾಡಬಹುದೆ?

ಸಂನ್ಯಾಸಿ—ಓಹೊ ಅದಕ್ಕೇನು ಸಂದೇಹ! ಬೇಕಾದ ಹಾಗೆ ಮಾತಾಡಬಹುದು. ಎಷ್ಟು ವರಗಳನ್ನು ಬೇಕಾದರೂ ಕೇಳಬಹುದು!

ಸಿಂಗಣ್ಣ—ಮುನಿದುಕೊಂಡರೆ?

ಸಂನ್ಯಾಸಿ—ಅವನಿರುವುದೇಕಯ್ಯ? ವರಗಳನ್ನು ದಯಪಾಲಿಸಲಲ್ಲವೇ? ಅದನ್ನು ಬಿಟ್ಟರೆ ಬೇರೆ ಕೆಲಸವಿದೆಯೇ ಅವನಿಗೆ?

ಸಿಂಗಣ್ಣ—ಹಾಗಾದರೆ ಕೊಡಿ ಸ್ವಾಮಿ; ನೋಡಿಯೇ ಬಿಡುತ್ತೇನೆ!

ಸಂನ್ಯಾಸಿ—ಹೆದರಬೇಡ ಶಿವನನ್ನು ಕಂಡು ಧೈರ್ಯವಾಗಿ ಮಾತಾಡು. ಎಷ್ಟೋ ಜನರು ಮಾತಾಡದೆಯೇ ಬಂದುಬಿಟ್ಟಿದ್ದಾರೆ. ನೀನೇನಾದರೂ ಹಾಗೆ ಮಾಡಿದರೆ ಆಮೇಲೆ ದರಿದ್ರ ತಪ್ಪದು!

ಸಿಂಗಣ್ಣ—ಹಾಗೆಂದರೇನು, ಗುರುಗಳೆ! ಮಹಾರಾಜರ ಹತ್ತಿರವೇ ಎಷ್ಟೋ ಸಾರಿ ಮುಲಾಜಿಲ್ಲದೆ ಮಾತಾಡಿಬಿಟ್ಟಿದ್ದೇನೆ. ಶಿವನೊಡನೆ ಮಾತಾಡಲಾರೆನೆ?

ಸಂನ್ಯಾಸಿ—ಹಾಗಾದರೆ ಪದ್ಮಾಸನ ಹಾಕು. (ಸಿಂಗಣ್ಣ ಹಾಕುವನು.) ಕತ್ತಿ ಬೀಗದ ಕೈ ಮೊದಲಾದ ಕಬ್ಬಿಣದ ಸಾಮಾನುಗಳನ್ನು ದೂರವಿಡು. (ಸಿಂಗಣ್ಣ

ಸಂನ್ಯಾಸಿಯ ಕಡೆ ನೋಡಲು) ಬೆಳ್ಳಿಬೆಟ್ಟಕ್ಕೆ ಹೋಗುವಾಗ ಕಬ್ಬಿಣದ ಸಾಮಾನು ಸಿರಬಾರದು. (ಹೇಳಿದಂತೆ ಮಾಡುವನು.) ಈಗ ಮೂಗಿನ ತುದಿಯನ್ನೇ ನೋಡು. (ಸಿಂಗಣ್ಣ ಸಂನ್ಯಾಸಿಯ ಮೂಗಿನ ಕಡೆ ನೋಡಲು) ನನ್ನ ಮೂಗಿನ ತುದಿಯಲ್ಲ; ನಿನ್ನ ಮೂಗಿನ ತುದಿ! (ಹಾಗೆಯೇ ಮಾಡುವನು.) ಅಭ್ಯಾಸವಿದ್ದವರೂ ಕೂಡ ಹೀಗೆ ಮಾಡಲಾರರು! ಭಲಾ! ಬಾಯಿ ತೆರೆ! (ತೆರೆಯಲು ಬಾಯಿಗೆ ಗುಳಿಗೆ ಹಾಕಿ) ನುಂಗು! ನುಂಗು! ಅಗಿದುಬಿಟ್ಟರೆ ನರಕದರ್ಶನವಾದೀತು! ಹಾಗೇ! ಹಾಗೇ!! ಈಗ ಧ್ಯಾನಮಾಡು! ಶಿವ! ಶಿವ! ಶಿವ! ಶಿವ! (ಕೈಯನ್ನು ಅವನ ಮೊಗದೆದುರು ಆಡಿಸುತ್ತಾ ಚಿಟಿಗೆ ಹಾಕುವನು.) ಎಲ್ಲ ಮಂಕಾಗುತ್ತಿದೆಯಲ್ಲವೇ? (ಸಿಂಗಣ್ಣ ಹೌದೆಂದು ತಲೆದೂಗುವನು.) ಈಗ ಮಾಯಾಪ್ರಪಂಚ ಎಂಬುದು ಚೆನ್ನಾಗಿ ಗೊತ್ತಾಗುತ್ತಿದೆಯಲ್ಲವೇ? (ಸಿಂಗಣ್ಣ ತಲೆದೂಗುವನು.) ಈಗ ನೋಡು, ನಿದ್ದೆ ಬಂದಂತಾಗುತ್ತಿದೆ! (ಸಿಂಗಣ್ಣ ತಲೆ ತೂಗುತ್ತ ತೂಗುತ್ತ ಉರುಳುವನು.) ಬಿದ್ದಿರು ಬೆಳಗಾಗುವವರೆಗೆ! (ಸಿಳ್ಳು ಹಾಕುವನು.)

(ಶಿವಯ್ಯ, ಹೊನ್ನಯ್ಯ ಪ್ರವೇಶಿಸುವರು.)

ತಡಮಾಡಬೇಡಿ; ಇದೋ ಬೀಗದ ಕೈ! (ಎತ್ತಿಕೊಟ್ಟು) ನಾನಲ್ಲಿಯೇ ದೂರದಲ್ಲಿ ನಿಂತು ಕಾಯುತ್ತಿರುತ್ತೇನೆ. ಯಾರಾದರೂ ಬಂದರೆ ಸಿಳ್ಳುಹಾಕುತ್ತೇನೆ. ಎಚ್ಚರಿಕೆ! ಬೇಗ ಬರಬೇಕು! ಹೊತ್ತಾದರೆ ಅವರೂ ಬಂದುಬಿಟ್ಟಾರು!

(ಹೋಗುವನು.)

ಹೊನ್ನಯ್ಯ—ಬೀಗ ತೆಗೆ! ಬೇಗ, ಶಿವಯ್ಯ!

(ಬೀಗ ತೆಗೆದು ಇಬ್ಬರೂ ಒಳಗೆ ಹೋಗುವರು.)

[ಪರದೆ ಬೀಳುವುದು]

## ದೃಶ್ಯ ೪

(ಸೆರೆಮನೆಯಲ್ಲಿ ಒಂದು ಕೋಣೆ. ಬಸವಯ್ಯನು ಮಲಗಿದ್ದಾನೆ. ಅವನ ಮುಖದಮೇಲೆ ಬೆಳ್ದಿಂಗಳು ಬಿದ್ದಿದೆ. ಸ್ಥಳವು ಅರ್ಧ ಮಾತ್ರ ಪ್ರದೀಪ್ತವಾಗಿದೆ. ಶಿವಯ್ಯನು ಅವಸರದಿಂದ ಪ್ರವೇಶಿಸಿ ಸುತ್ತಲೂ ಹುಡುಕುನೋಟವನ್ನು ಬೀರಿ ಬಸವಯ್ಯನನ್ನು ಕಂಡು ಸ್ವಲ್ಪ ಬಳಿಸಾರಿ ನೋಡುತ್ತ ನಿಲ್ಲುತ್ತಾನೆ.)

ಶಿವಯ್ಯ— ಸೆರೆಮನೆಯೊಳಿದ್ದರೂ ಎನಿತು ಶಾಂತಿಯ ತಳೆದು
ನಿದ್ರೆಗೈಯುತ್ತಿಹನು! ಅಕುಟಿಲ ಮನಸ್ಕರಿಗೆ
ಪ್ರಕೃತಿಯಿಾಯುವ ಸೊಗದ ಕಾಣ್ಕೆಯಿದು.—
ಕತ್ತಲಲಿ ಸೆರೆಸಿಕ್ಕಿ ತನ್ನ ಸುಂದರವದನ-

ರಂಗದಲಿ ನಲಿವ ಈ ರಜನೀ ಸುಶೋಭಿತಾ
ಜ್ಯೋತ್ಸ್ನ ಯೊಲೆ ಈತನೂ ಬಂದಿಯಾಗಿಹನಿಲ್ಲ !
ತಳುವಿದರೆ ಪ್ರಮಾದ ! ಹೊನ್ನಯ್ಯನಾಗಲಿ
ಲಿಂಗಣ್ಣ ಮಂತ್ರಿಯುನು ಕೂಡಿ ಹೋಗಿರಬಹುದು.
ಆಗಲಿ ಎಚ್ಚರಿಸುವೆನು. (ಹತ್ತಿರ ಹೋಗಿ ಬಗ್ಗಿ ಮತ್ತೆ ಎದ್ದು)
ಆದರೆ—(ನಿಟ್ಟುಸಿರು ಬಿಡುವನು.)
ಅಯ್ಯೋ ಈಗೇನು ಮಾಡಲಿ ? (ಯೋಚಿಸುವನು.)
ಛಿಃ ದುರಾಲೋಚನೆಯೆ, ತೊಲಗು ದೂರ !
ಶಿವಯ್ಯ, ಇದೇನಿದು ನಿನ್ನ ವಿಪರೀತ ? (ನಿಲ್ಲುವನು.)
ಇಲ್ಲ. ನನಗಿದುವೆ ಸುಸಮಯ !
ಬಸವಯ್ಯ, ನೀನುಳಿದರೆನಗೆ ಸುಖವಿಲ್ಲ.
ನೀನು ಮಹಾನುಭಾವ ! ನಾನು ನೀಚ !
ಇರಬಹುದು ! ನಾ ಬಲ್ಲೆ !—ಆದರೆ—
ರುದ್ರಾಂಬೆಗೋಸುಗವೆ ನಿನ್ನ ನಾನೀ ರೀತಿ
ಸೆರೆಯಿಂದ ಬಿಡಿಸಲ್ಕೆತಂದೆ !—ಆದರೆ
ನೀನಿಳೆಯೊಳಿರುವನ್ನೆವರಮೆನಗೆ ರುದ್ರಾಂಬೆ
ದೊರಕಲಾರಳು ! ದೊರಕಲಾರಳು !
ಕಮಲಪುರ ಬೊಬ್ಬುಳಿಯನಂತೊಲಿಯುವುದು ತುಂಬಿ !
ಅದರಿಂದ—ಅದರಿಂದ—ಅದರಿಂದ

(ಹೇಳುತ್ತ ಕಠಾರಿಯನ್ನು ಹೊರಗೆಳೆಯುವನು.)

ಛಿಃ, ಶಿವಯ್ಯ, ಮರೆತುಬಿಡು ! ಮರೆತುಬಿಡು !

(ಮೇಲೆ ನೋಡಿ ಚಿಂತೆಯನ್ನು ಬದಲಾಯಿಸುವನು.)

ಶಿವಯ್ಯ, ನೋಡಲ್ಲಿ !
ಬೆಳ್ದಿಂಗಳೆನಿತು ಚೆಲುವಾಗಿಹುದು !
ನೋಡಲ್ಲಿ, ಅಲ್ಲಿ ನೋಡು !
ಬೆಳ್ಮುಗಿಲು ತಿಳಿಬಾನಿನಲಿ ಹೇಗೆ ತೇಲುತಿದೆ !
ಎನಿತು ಶಾಂತಿಯೊಳದ್ದಿ ಪವಡಿಸಿಹುದೀ ರಾತ್ರಿ !—
ಹೊನ್ನಯ್ಯ ಲಿಂಗಣ್ಣ ಮಂತ್ರಿಗಳು ನಿಮಗಾಗಿ
ಕಾಯುತಿಲ್ಲವೆ ಅಲ್ಲಿ, ದೂರ ಮರದಡಿಯಲ್ಲಿ
ಸಂನ್ಯಾಸಿಯೊಡನೆ ?—

ಎದೆಯ ಕಿಲುಬನು ಬಿಸುಡು!
ಗೆಳೆಯ ಬಸವಯ್ಯನನು ಎಚ್ಚರಿಸು!—
ನಿನ್ನವಳೆ ಆಗಿಲ್ಲವೇ ಈಗ ರುದ್ರಾಂಬೆ?
ನಿನಗೀತನೆಳೆತನದ ಕೆಳೆಯಿಲ್ಲವೇ?
ನೋಡೆನಿತು ಅಕುಟಿಲತೆ ಮೆರೆದಿಹುದು
ಈತನೀ ಸೌಮ್ಯತನು ವದನದಲಿ! (ಸುಯ್ಯುವನು.)
ಆದರೆ !!—(ಖಿನ್ನನಾಗಿ ಕಠಾರಿಯನು ಒರೆಗೆ ಮೆಲ್ಲಗೆ ಸೇರಿಸಿ)
ಇಲ್ಲ! ಇಲ್ಲ! ನನಗಿದೇ ಸುಸಮಯ!
ಈತನಿರೆ ಹೇಗೆನ್ನನೊಲಿದಾಳು ರುದ್ರಾಂಬೆ?
ಬಸವಯ್ಯಾ, ನಿನ್ನ ಸೌಂದರ್ಯವೇ ನಿನಗಿಂದು
ಸರ್ಪಚುಂಬನದಂತೆ ಮೃತ್ಯುವಾಗಿಹುದು!
ಆದರಿಂದ—ಆದರಿಂದ!—

(ಕಠಾರಿಯನು ಸರ್ರನೆ ಹೊರಗೆಳೆದು ಬಸವಯ್ಯನನು ತಿವಿಯಲು ಹೋಗಿ ಬೆಚ್ಚಿ)

ನೀನೇಕೆ ಇಲ್ಲಿಗೈತಂದೆ, ರುದ್ರಾಂಬೆ? (ಕಣ್ಣುಜ್ಜಿ)
ಇದೇನಿದು ಮಾಯೆ?—
ರುದ್ರಾಂಬೆಯನು ಕಂಡೆನಲ್ಲವೆ?

(ಎವೆಯಿಕ್ಕದೆ ಆಲೋಚಿಸಿ ಏನನೋ ನಿರ್ಣಯಿಸಿದವನಂತೆ ಎಚ್ಚತ್ತು)

ಥೂ! ನಿನಗಿದೇನಿದು ಹೀನಬುದ್ಧಿ, ಶಿವಯ್ಯ!

(ಕಠಾರಿಯನು ಬಲವಾಗಿ ಕೆಳಗೆ ಬಿಸಾಡುವನು. ಸದ್ದಾಗಿ ಬಸವಯ್ಯನಿಗೆ ಎಚ್ಚರವಾಗುತ್ತದೆ.)

ಬಸವಯ್ಯ—ಯಾರದು?

ಶಿವಯ್ಯ—ನಾನು, ಬಸವಯ್ಯ! ಏಳು, ನನ್ನೊಡನೆ ಬಾ!

ಬಸವಯ್ಯ (ಫಕ್ಕನೆ ಎದ್ದುನಿಂತು)—ಶಿವಯ್ಯ, ಏನಿದು? ಎಲ್ಲಿಗೆ?

ಶಿವಯ್ಯ—ಹೇಳಲು ಹೊತ್ತಿಲ್ಲ. ಬೇಗ ಬಾ ನನ್ನೊಡನೆ?

ಬಸವಯ್ಯ (ದೀರ್ಘವಾಗಿ)—ಕಡೆಗೂ ನೀನೆ ಬಂದೆಯೇನು ಕೊಲೆ ಮಾಡುವುದಕ್ಕೆ?

ಶಿವಯ್ಯ—ಅಲ್ಲ; ನಿನ್ನನು ಕೊಲೆಯಿಂದ ಬಿಡಿಸಲೆಂದೈತಂದೆ. ಹೊನ್ನಯ್ಯನು ಲಿಂಗಣ್ಣ ಮಂತ್ರಿಗಳನು ಕರೆದೊಯ್ದು ನಮಗಾಗಿ ಹೊರಗೆ ಕಾಯುತ್ತಿದ್ದಾನೆ. ಹೊತ್ತುಮಾಡಿದರೆ ಪ್ರಮಾದವಾದೀತು! ಬಾ, ಬೇಗ ಬಾ!

(ಬಸವಯ್ಯನು ವೇಗವಾಗಿ ಶಿವಯ್ಯನ ಹಿಂದೆ ಹೋಗುವನು.)

[ಪರದೆ ಬೀಳುವುದು.]

## ದೃಶ್ಯ ೫

(ಸೆರೆಮನೆಗೆ ತುಸು ದೂರದಲ್ಲಿ ಮರಗಳ ಗುಂಪಿನ ಮರೆಯಲ್ಲಿ ಹೊನ್ನಯ್ಯ, ಲಿಂಗಣ್ಣ ಮಂತ್ರಿ ಮತ್ತು ಸಂನ್ಯಾಸಿ ಮೂವರೂ ಕಾಯುತ್ತಿರುವರು.)

ಸಂನ್ಯಾಸಿ—ಹೊನ್ನಯ್ಯ, ಇದೇನು ಇಷ್ಟು ಹೊತ್ತಾದರೂ ಬರಲೆ ಇಲ್ಲ?

ಹೊನ್ನಯ್ಯ—ಅವನು ಬಸವಯ್ಯನಿದ್ದ ಕೋಣೆಗೆ ಹೋದಮೇಲೆಯೇ ನಾನು ಮಂತ್ರಿಗಳಿದ್ದ ಕೋಣೆಗೆ ಹೋದದ್ದು. ಅವರು ನಮಗಿಂತಲೂ ಮೊದಲೇ ಬಂದಿರಬಹುದು ಎಂದುಕೊಂಡಿದ್ದೆ.

ಲಿಂಗಣ್ಣ—ಏನಾದರೂ ಪ್ರಮಾದ ಸಂಭವಿಸಿತೋ ಏನೋ?

ಸಂನ್ಯಾಸಿ—ಇಲ್ಲ; ಅವರಾರೂ ಇನ್ನೂ ಬಂದಿಲ್ಲ. ಬಂದರೂ ತಡಮಾಡಿ ಬರುತ್ತಾರೆ. ನಾನು ಮೊದಲೇ ಸಂಚುಮಾಡಿದ್ದೇನೆ; ಅವರು ಬಂದರೂ ನಮ್ಮ ಕೇಳಿಸುವುದು.

ಹೊನ್ನಯ್ಯ—ನಾನು ಹೋಗಿ ನೋಡಿಕೊಂಡು ಬರಲೇನು?

ಸಂನ್ಯಾಸಿ—ಅದೇನೂ ಬೇಡ. ನಾನು ನೋಡಿಕೊಳ್ಳುತ್ತೇನೆ. ನೀವೀಗ ಒಂದು ಕೆಲಸಮಾಡಿದರೆ ಒಳ್ಳೆಯದು.

ಹೊನ್ನಯ್ಯ—ಏನು?

ಸಂನ್ಯಾಸಿ—ನೀವಿಬ್ಬರೂ ಈಗಲೇ ಹೊರಡುವುದು ಲೇಸು.

ಹೊನ್ನಯ್ಯ—ಬಸವಯ್ಯ?

ಸಂನ್ಯಾಸಿ—ಅವರಿಬ್ಬರೂ ಬಂದೊಡನೆಯೇ ಹಿಂದೆಯೇ ಕಳುಹಿಸುತ್ತೇನೆ—ಲಿಂಗಣ್ಣ ಮಂತ್ರಿಗಳು ಮುದುಕರು. ಬೇಗ ಕುದುರೆ ಸವಾರಿ ಮಾಡಲಾರರು. ಎಂತಿದ್ದರೂ ನಿಮ್ಮನ್ನವರು ಸಂಧಿಸುವರು.

ಹೊನ್ನಯ್ಯ—ಎಲ್ಲಿಯಾದರೂ ಅವರು ದಾರಿ ತಪ್ಪಿದರೆ?

ಸಂನ್ಯಾಸಿ—ನೀವು ಕುಂಸಿಯ ಮಾರ್ಗವಾಗಿಯೇ ಹೋಗಿ, ಅವರು ದಾರಿ ತಪ್ಪದಂತೆ ನಾನು ನೋಡಿಕೊಳ್ಳುತ್ತೇನೆ.—ಹೊತ್ತಾಯ್ತು, ಹೊರಡಿ.

ಹೊನ್ನಯ್ಯ—ನಮ್ಮ ಕುದುರೆಗಳೆಲ್ಲಿ?

ಸಂನ್ಯಾಸಿ (ಪಕ್ಕಕ್ಕೆ ಕೈತೋರಿ)— ಅಲ್ಲಿವೆ. ಹತ್ತಿ ಹೊರಡಿ (ಲಿಂಗಣ್ಣ ಹೊನ್ನಯ್ಯ ಹೊರಡುವರು.) ಇದೇಕೆ ಇನ್ನೂ ಬರಲಿಲ್ಲ? ಆ ಕೊಂಕು ನಡತೆಯ ಶಿವಯ್ಯನನು ನಂಬುವುದು ಸುಲಭವಲ್ಲ!—ಇರಲಿ ಸಿಳ್ಳು ಹಾಕಿ ನೋಡುತ್ತೇನೆ. (ಸಿಳ್ಳು ಹಾಕುವನು. ಕಾಯುವನು.) ಓಹೊ ಅಲ್ಲಿಯೆ ಬರುತ್ತಿದಾರೆ.

(ಶಿವಯ್ಯ ಬಸವಯ್ಯ ಬರುವರು.)

ಇದೇನು ಶಿವಯ್ಯ, ಇಷ್ಟು ಹೊತ್ತಾಯಿತೇಕೆ?

ಶಿವಯ್ಯ—ಬಸವಯ್ಯ ಬೇಗ ಏಳಲೆ ಇಲ್ಲ. ಸೆರೆಮನೆಯೊ ಅರಮನೆಯೊ? ಅವನಿಗೆರಡೂ ಒಂದೇ!

ಬಸವಯ್ಯ—ಗುರುವರ್ಯರಿಗೆ ನಮಸ್ಕಾರ!

ಸಂನ್ಯಾಸಿ—ರಾಜಕುಮಾರನಿಗೆ ಈಶ್ವರನ ಆಶೀರ್ವಾದವಿರಲಿ!

ಬಸವಯ್ಯ—ಅವರೆಲ್ಲಿ?

ಸಂನ್ಯಾಸಿ—ಇದುವರೆಗೂ ಕಾದಿದ್ದರು ನಿಮಗಾಗಿ. ನಾನೇ ಅವರನ್ನು ಮುಂದೆ ಹೋಗುವಂತೆ ಹೇಳಿದೆ. ತಡಮಾಡಿದರಾಗದು. ನೀವೂ ಹೊರಡಿ.

ಶಿವಯ್ಯ—ಕುದುರೆಗಳೆಲ್ಲಿ?

ಸಂನ್ಯಾಸಿ (ಪಕ್ಕಕ್ಕೆ ತೋರುತ್ತ)—ಅಲ್ಲಿವೆ. (ಅವರಿಬ್ಬರೂ ಎರಡು ಹೆಜ್ಜೆಯಿಟ್ಟು ಹೋಗುವುದರಲ್ಲಿಯೇ) ಸ್ವಲ್ಪ ನಿಲ್ಲಿ—

ಶಿವಯ್ಯ (ನಿಂತು)—ಏಕೆ?

ಸಂನ್ಯಾಸಿ—ಬಸವಯ್ಯನೊಡನೆ ಮಾತಾಡುವುದಿದೆ.

ಬಸವಯ್ಯ—ಏನದು? ಸಿದ್ಧನಿದ್ದೇನೆ. (ಮುಂದೆ ಬರುವನು.)

ಸಂನ್ಯಾಸಿ—ಹೈದರಾಲಿಯವರು ಇಷ್ಟರಲ್ಲಿಯೆ ಶಿವಮೊಗ್ಗೆಗೆ ಬಂದಿರಬಹುದು. ನಾನು ಕೊಡುವ ಪತ್ರವನು ತೆಗೆದುಕೊಂಡು ಹೋಗಿ ನೀನೇ ಅವರನ್ನು ಕಾಣಬೇಕು. ಇದರಲ್ಲಿ ಅನೇಕ ವಿಚಾರಗಳಿವೆ. ನಿನಗಾತನು ನೆರವಾಗುವನು. (ಪತ್ರ ಕೊಡುತ್ತಾನೆ.)

ಬಸವಯ್ಯ (ತೆಗೆದುಕೊಳ್ಳುತ್ತ)—ಎಲ್ಲ ಶುಭವಾಗುವುದು, ನಿಮ್ಮ ಕೃಪೆಯಿರಲಿ!

ಸಂನ್ಯಾಸಿ—ಈಶ್ವರ ಕೃಪೆ!—ತಡಮಾಡಬೇಡಿ, ನಡೆಯಿರಿ.

ಶಿವಯ್ಯ—ಬಾ, ಬಸವಯ್ಯ.

ಸಂನ್ಯಾಸಿ—ಅವರಿಬ್ಬರೂ ಏಟೂರಿನ ಕಾಡುದಾರಿಯಲ್ಲಿ ಕುಂಸಿಯ ಮಾರ್ಗವಾಗಿ ಹೋಗುತ್ತಾರೆ. ನೀವೂ ಅದೇ ಮಾರ್ಗದಲ್ಲಿಯೆ ಹೋಗಿ.

(ಕೆಮ್ಮಿನ ಸದ್ದು ಕೇಳುವುದು.)

ಬಸವಯ್ಯ—ಅದೇನದು ಸದ್ದು?

ಸಂನ್ಯಾಸಿ—ನಡೆಯಿರಿ! ನಡೆಯಿರಿ!—ಅವರೇ ಕೊಲೆಗಾರರು! ಸೆರೆಮನೆಗೆ ಹೊರಟಿದ್ದಾರೆ!—ನಿಮ್ಮನು ಕತ್ತರಿಸಲು!

(ಶಿವಯ್ಯ ಬಸವಯ್ಯ ಹೋಗುವರು.)

ಎಂತಹ ದಿವ್ಯ ಶೀಲವದು ನಿನ್ನದು ಓ ಬಸವಯ್ಯ. ನಿನಗೆ ನಿಜವಾದ ನೆಲೆ ಎಲೆವನೆ, ಅರಮನೆಯಲ್ಲ. ಕೃತಘ್ನೆ ಬಿದಿ ನಿನ್ನನಿಲ್ಲಿಗೆ ಕಳುಹಿಸಿದೆ. ಬಿದನೂರ

ನೆಲ್ಲ ಅರಸಿದರೂ ನಿನ್ನಂತಹ ಸುಸಂಸ್ಕೃತ ಸುಕೃತಾತ್ಮರೊಬ್ಬರಿಲ್ಲ. ನಿನಗೆ ಸರಿಸಮನಾಗಿ ನಿಲ್ಲುವನೆಂದರೆ ಆ ಹೊನ್ನಯ್ಯನೊಬ್ಬನೇ! ಆದರಾತನಲಿ ನಿನ್ನೊಳಿರುವನಿತು ರಾಜಗಾಂಭೀರ್ಯವಿಲ್ಲ! ನನ್ನಲ್ಲಿರುವ ಶಕ್ತಿಸಾಹಸಗಳೆಲ್ಲ ವನೂ ನಿನಗಾಗಿ ನಿವೇದಿಸುತ್ತೇನೆ. ಆದರೇನೀ ಕೆಮ್ಮುಗಳು! (ಮುಗುಳು ನಗುವನು. ಕೆಮ್ಮಿನ ಸದ್ದು ಹೆಚ್ಚುವುದು) ಅವರೇ ಬರುತ್ತಿದ್ದಾರೆ. ನಾನೀಗ ಮರೆಯಾಗುವೆನು.

(ಕೆಮ್ಮಿನ ಸದ್ದು ಹೆಚ್ಚಾಗುವುದು. ಸಂನ್ಯಾಸಿ ಹೋಗುವನು.)

[ಪರದೆ ಬೀಳುವುದು]

---

*

# ಅಂಕ ನಾಲ್ಕು

## ದೃಶ್ಯ ೧

(ಮಧ್ಯಾಹ್ನದ ಸಮಯ ರಾಜಬೀದಿಯಲ್ಲಿ ಒಂದು ಹೆಮ್ಮರದ ನೆಳಲಿನಲ್ಲಿ ಇಬ್ಬರು ಮೂವರು ಮಾತಾಡುತ್ತಿರುವರು. ಬರುತ್ತ ಬರುತ್ತ ಗುಂಪು ಹೆಚ್ಚುವುದು. ಕೆಲರು ಸಭ್ಯ ವೇಷದವರು ; ಕೆಲರು ಕೆಲಸಗಾರರು ; ಕೆಲರು ವ್ಯಾಪಾರಿಗಳು. ಮೂಟೆ ಹೊತ್ತುಕೊಂಡು ಹೋಗುವ ಹುಡುಗನೊಬ್ಬನು ಹಾಗೆಯೇ ಗುಂಪು ಸೇರುವನು. ಕಟ್ಟಿಗೆ ಹೊರೆಯವನೊಬ್ಬನು ಅಲ್ಲಿಯೇ ನಿಂತು ಆಲೈಸತೊಡಗುವನು ಲಿಂಗಧಾರಿಯಾದ ವೀರಶೈವನೊಬ್ಬನು ಕರಡಿಗೆಯನ್ನು ಮುಟ್ಟುತ್ತ ಗುಂಪುಸೇರಿ ನಿಲ್ಲುವನು. ಹೀಗೆ ಗುಂಪು ಸೇರುವುದು.)

ಒಂದನೆ—ನಿಜವಾಗಿಯೂ ಸೋಜಿಗವೇ ಕಾಣಯ್ಯ. ಆ ಕಾವಲುಗಾರ ಸಿಂಗಣ್ಣ ಮೈಮರೆತು ಸತ್ತಂತೆ ಬಿದ್ದಿದ್ದನಂತೆ. ಬೀಗಗಳೆಲ್ಲ ಕಳಚಿಕೊಂಡಿದ್ದುವಂತೆ. ಬಾಗಿಲುಗಳೆಲ್ಲ ತೆರೆದಿದ್ದುವಂತೆ. ಅರಸುಮಕ್ಕಳೂ ಇಲ್ಲ, ಮಂತ್ರಿಗಳೂ ಇಲ್ಲ! ಅರಸುಮಕ್ಕಳನ್ನು ಇಟ್ಟಿದ್ದ ಕೋಣೆಯಲ್ಲಿ ಒಂದು ಕಠಾರಿ ಬೇರೆ ಬಿದ್ದಿತ್ತಂತೆ!

ಎರಡನೆ—ಏನಾದರಾಗಲಿ ಆ ಪುಣ್ಯಾತ್ಮರನ್ನು ದೇವರೇ ಕಾಪಾಡಿದಂತಾಯಿತು.

ಮೂರನೆ (ದೀರ್ಘವಾಗಿ)—ದೇವರಲ್ಲವಂತಯ್ಯ!

ಎರಡನೆ—ಮತ್ತೇನು ಮನುಷ್ಯರೆ?

ಮೂರನೆ—ಮನುಷ್ಯರೂ ಅಲ್ಲವಂತೆ!

ಒಂದನೆ—ಹಾಗಾದರೆ?

ಮೂರನೆ—ತೀರಿಹೋದ ಬಸಪ್ಪನಾಯಕರಂತೆ!

ಒಂದನೆ—ನಿಜವಾಗಿಯೂ?

ಮೂರನೆ—ನಿಮ್ಮ ಹತ್ತಿರ ನಾನು ಸುಳ್ಳು ಹೇಳಬೇಕೆ?

ಎರಡನೆ—ಅದು ಹೇಗೆ ಗೊತ್ತು ನಿನಗೆ?

ಮೂರನೆ—ಹೇಗೆಯೇ? ಹೇಳುತ್ತೇನೆ ಕೇಳಿ! ಸತ್ತುಹೋದ ದೊರೆಗಳು ರಾತ್ರಿ ತಿರುಗುತ್ತಿದ್ದುದು ನಿಮಗೆ ಗೊತ್ತಿಲ್ಲವೆ?

ಒಂದನೆ—ಓಹೋ ಅದೇನು? ಊರಿಗೆಲ್ಲ ಗೊತ್ತು! ಕೆಂಚಣ್ಣ, ಹೊನ್ನಯ್ಯ ಕಂಡಿದ್ದೂ ಬಸವಯ್ಯನವರು ಮಾತಾಡಿದ್ದೂ ಎಲ್ಲ ಹಬ್ಬಿಹೋಗಿದೆ ಸುದ್ದಿ.

ಮೂರನೆ—ಬಾಗಿಲೂ ತೆರದಿಲ್ಲವಂತೆ, ಬೀಗವೂ ಕಳಚಿಲ್ಲವಂತೆ. ಎಲ್ಲ ಇದ್ದಂತೆಯೇ ಇತ್ತಂತೆ. ಬಸಪ್ಪನಾಯಕರೇ ಭೂತವಾಗಿ ಬಂದು ಅವರಿಬ್ಬರನ್ನೂ ಎತ್ತಿಕೊಂಡು ಹೋದರಂತೆ!

ಒಂದನೆ—ಇದೇನೋ ಹೊಸ ಸುದ್ದಿ ; ಬಹಳ ಚೆನ್ನಾಗಿದೆ! ನಿನಗಾರಯ್ಯಾ ಇದನ್ನು ಹೇಳಿದವರು?

ಮೂರನೆ—ಸಿಂಗಣ್ಣನೇ ಹೇಳಿದನಂತೆ! ರಾತ್ರಿ ಕಣ್ಣುಮುಚ್ಚದೆ ಕಾವಲು ಕಾಯುತ್ತಿದ್ದನಂತೆ. ಹಾಲು ಚೆಲ್ಲಿದಂತೆ ಬೆಳ್ದಿಂಗಳಿತ್ತಂತೆ. ಇದ್ದಕ್ಕಿದ್ದ ಹಾಗೆ ಆಕಾಶ ಇಬ್ಭಾಗವಾಯಿತಂತೆ! ನಕ್ಷತ್ರಗಳ ಪುಷ್ಪವೃಷ್ಟಿಯ ನಡುವೆ ಬಸಪ್ಪ ನಾಯಕರು ಕಾಣಿಸಿಕೊಂಡರಂತೆ. ಅವರ ಹಿಂದೆಯೂ ಮುಂದೆಯೂ ಬೇಕಾದಷ್ಟು ಪರಿವಾರವಿತ್ತಂತೆ. ಅವನ ತಂದೆ, ತಾತ, ಮುತ್ತಾತ, ಮುತ್ತೂ ಮುತ್ತಾತ ಎಲ್ಲರನ್ನೂ ಕಂಡನಂತೆ ಆ ಸಿಂಗಣ್ಣ, ದೊರೆಗಳ ಪರಿವಾರದಲ್ಲಿ! ಕಂಡು ಕಂಗಾಲಾಗಿ, ಬಿಟ್ಟ ಕಣ್ಣು ಮುಚ್ಚದೆ, ನೋಡುತ್ತಿದ್ದನಂತೆ! ಅಷ್ಟು ಹೊತ್ತಿಗೆ ದೊಡ್ಡದೊಂದು ಬಿರುಗಾಳಿ ಎದ್ದಿತಂತೆ! ಭೂಮಿಯೆಲ್ಲ ದೂಳಾಗಿ ಮೇಲೆದ್ದು ಬಿಟ್ಟಿತಂತೆ. ಕೂಡಲೆ ಕತ್ತಲೂ ಕವಿಯಿತಂತೆ. ಸಿಡಿಲು ಮಿಂಚು ಜೋರಾಯಿತಂತೆ. ಅದರ ರಭಸಕ್ಕೇ ಸಿಂಗಣ್ಣ ಮೂರ್ಛೆಹೋಗಿದ್ದನಂತೆ!

ಎರಡನೆ—ಹಾಗಾಗಬೇಕು! ಅನ್ಯಾಯವಾದರೂ ಎಷ್ಟು ದಿನವೆಂದು ನಡೆಯುತ್ತದೆ. ಸಜ್ಜನರಿಗೆ ಮನುಷ್ಯರಿಲ್ಲದಿದ್ದರೆ ದೇವರೇ ಸಹಾಯಮಾಡುತ್ತಾನೆ.

ಒಂದನೆ—ಏನಾದರಾಗಲಿ, ಈ ಮಾರಿಗಳ ಕೈಯಿಂದ ತಪ್ಪಿಸಿಕೊಂಡು ಹೋದರಲ್ಲಾ ಅಷ್ಟೇ ಸಾಕು!

ನಾಲ್ಕನೆ—ಸ್ವಲ್ಪ ಮೆಲ್ಲಗೆ ಮಾತಾಡಯ್ಯಾ. ನಗರದಲ್ಲಿ ಎಲ್ಲಿ ನೋಡಿದರೂ ಸೈನಿಕರಾಗಿದ್ದಾರೆ. ಯಾರನ್ನು ಬೆದಕಿದರೂ ಗೂಢಚಾರರೆ! ನಿನ್ನ ಮಾತೆಲ್ಲಿಯಾದರೂ ಅವರಿಗೆ ಕೇಳಿಸಿದರೆ ನಿನ್ನನ್ನೂ ತೆಗೆದುಕೊಂಡು ಹೋಗಿ ಗಿಡ್ಡಂಗಿಗೇರಿಸುತ್ತಾರೆ.

ಒಂದನೆ—ಹೋದರೆ ಹೋಗಲಿ, ಬಿಡಯ್ಯಾ. ಈ ಹಾಳು ಜೀವ! ಈ ಆರಗೆಟ್ಟ, ಕುಲಗೆಟ್ಟ, ಬಾಳ್ಗೆಟ್ಟ ಊರಿನಲ್ಲಿ ಬಾಳುವುದಕ್ಕಿಂತ ನರಕದಲ್ಲಿ ನಾಯಿಯಾಗಿರುವುದು ಮೇಲು! ಎಷ್ಟು ದಿನ ಅಂತಾ ನಾವು ಸಹಿಸುವುದು ಈ ಚಂಡಾಲರನ್ನು?

ಐದನೆ—ಇನ್ನು ಹೆಚ್ಚುದಿನ ಬೇಕಿಲ್ಲವಯ್ಯಾ!

ನಾಲ್ಕನೆ—ಅದೇನು?

ಐದನೆ—ಲಿಂಗಣ್ಣ ಮಂತ್ರಿಗಳು ತಪ್ಪಿಸಿಕೊಂಡು ಹೋದಮೇಲೆ ಇವರನ್ನೆಲ್ಲ ಸುಮ್ಮನೆ ಬಿಟ್ಟುಬಿಡುತ್ತಾರೆಯೆ?

ಮೂರನೆ—ತಪ್ಪಿಸಿಕೊಂಡು ಹೋಗಿದ್ದೆಲ್ಲಿಗಯ್ಯಾ? ಈ ಹಾಳು ಪ್ರಪಂಚ ಬಿಟ್ಟು ಸ್ವರ್ಗಕ್ಕೆ ಹೋದರು, ಅಷ್ಟೇ!

ಐದನೆ—ಸ್ವರ್ಗಕ್ಕೂ ಇಲ್ಲ, ನರ್ಗಕ್ಕೂ ಇಲ್ಲ.

ಮೂರನೆ—ಹೌದಯ್ಯಾ, ಬಸಪ್ಪನಾಯಕರೇ ಬಂದು ಎತ್ತಿಕೊಂಡು ಹೋದರಂತೆ!

(ಐದನೆಯವನು ನಗುವನು.)

ಎರಡನೆ—ಹೌದಂತಯ್ಯಾ, ನಗುವುದೇಕೆ?

ಐದನೆ—ಅವನು ಹೇಳಿದ ಗರುಡಪುರಾಣ ನಂಬುತ್ತೀರಲ್ಲಾ ಎಂದು.

ಮೂರನೆ—ಏನಯ್ಯಾ, ಗರುಡಪುರಾಣ, ಗಿರುಡಪುರಾಣ ಎಂದು ಹಾಸ್ಯಮಾಡುತ್ತೀಯೆ!

ಐದನೆ—ನೀನು ಹೇಳಿದ್ದು ಮತ್ತೇನು? ವೇದವೆಂದು ತಿಳಿದುಕೊಂಡಿದ್ದೀಯೇನೊ!

ಮೂರನೆ (ಸಿಟ್ಟಿದ್ದು)—ನಿನಗೆ ತಲೆಗಿಲೆ ಕೆಟ್ಟಿದೆಯೋ?

ಐದನೆ (ಶಾಂತನಾಗಿ ಹಾಸ್ಯದಿಂದ)—ನನಗೆ?

ಮೂರನೆ—ನಿನಗೆ ಗ್ರಹಚಾರ ನೆಟ್ಟಗಿಲ್ಲ, ಶನಿ ವಕ್ರಿಸಿದೆ.

ಐದನೆ (ನಗುತ್ತ)—ನನಗೋ? ನಿನಗೋ?

ಮೂರನೆ—ಏನು ಹೆಚ್ಚು ಕಡಿಮೆ ಮಾತಾಡುತ್ತೀಯಾ?

ಐದನೆ—ನೀನೇನು ತಕ್ಕಡಿಯಲ್ಲಿ ತೂಗಿ ಮಾತಾಡಿದ್ದೇನೆಂದು—

ಮೂರನೆ—ಹಲ್ಲು ಉದುರಿಸಿಬಿಟ್ಟೇನು! ಮಾತಾಡಬೇಡ!

(ಮುಂದೆ ನುಗ್ಗುವನು. ಜನರು ತಡೆಯುವರು.)

ಐದನೆ—ಅಲ್ಲಯ್ಯಾ, ನನ್ನ ಹಲ್ಲು ಉದುರಿದ ಮಾತ್ರಕ್ಕೆ ನೀನು ಬಿಟ್ಟ ಬುರುಡೆ ಸತ್ಯವಾಗುತ್ತದೆಯೇ?

ನಾಲ್ಕನೆ—ಹೋಗಲಿಬಿಡಯ್ಯಾ. ಸತ್ಯ ಏನು ಹೇಳಿಬಿಡು.

ಐದನೆ—ನಿನ್ನೆ ರಾತ್ರಿ ಅವರಿಬ್ಬರೂ ಕೊಲೆಯಾಗಬೇಕಿತ್ತಂತೆ. ಕೊಲೆಗಾರರೂ ಹೋದರಂತೆ. ಕಾವಲುಗಾರ ಬಿದ್ದಿದ್ದನಂತೆ—ಪ್ರಜ್ಞೆ ತಪ್ಪಿ. ಸೆರೆಮನೆಯ ಬೀಗ ಬಾಗಿಲು ಎಲ್ಲ ತೆರೆದಿದ್ದುವಂತೆ. ಬಸವಯ್ಯ ಲಿಂಗಣ್ಣ ಮಂತ್ರಿಗಳು ಇರಲಿಲ್ಲವಂತೆ. ಅರಸುಕುಮಾರನನ್ನು ಸೆರೆಯಿಟ್ಟಿದ್ದ ಕೋಣೆಯಲ್ಲಿ ಒಂದು ಕಠಾರಿ ಬಿದ್ದಿತ್ತಂತೆ. ಅದರಿಂದ ಸ್ವಲ್ಪ ಸತ್ಯ ಬಹಿರಂಗವಾಗಿದೆ.

ಎರಡನೆ—ಏನದು?

ಐದನೆ—ಆ ಕಠಾರಿಯ ಮೇಲೆ ಶಿವಯ್ಯನ ಹೆಸರು ಕೆತ್ತಿದೆಯಂತೆ.

ಒಂದನೆ—ನಿಜವೇ?

ಐದನೆ—ನೀವು ನಿಜವೆಂದರೆ ನಿಜ; ಸುಳ್ಳೆಂದರೆ ಸುಳ್ಳು.

ನಾಲ್ಕನೆ—ಹೋಗಲಿ, ಆಮೇಲೆ?

ಐದನೆ—ಸೇನಾಪತಿ ನಿಂಬಯ್ಯನವರೂ ರಾಣಿಯವರೂ ಬಹಳ ಕೋಪಗೊಂಡು

ಕಾವಲುಗಾರನನ್ನು ಸೆರೆಯಲ್ಲಿಡಿಸಿ, ಶಿವಯ್ಯನನ್ನು ಹುಡುಕಿಸಿದರಂತೆ. ಊರಿನಲ್ಲಿ ಎಲ್ಲಿಯೂ ಅವನ ನೆಲೆ ಸಿಕ್ಕಲಿಲ್ಲವಂತೆ. ಆಮೇಲೆ ರಾಜಕುಮಾರರ ಮಿತ್ರ ಹೊನ್ನಯ್ಯನೂ ಇಲ್ಲವೆಂದು ಸುದ್ದಿ ಇದೆ.

ಒಂದನೆ—ಏನೋ ಎಲ್ಲವೂ ಬಹಳ ವಿಚಿತ್ರವಾಗಿದೆ! ಅದಕ್ಕಾಗಿಯೇ ಈ ರೀತಿ ಸೈನಿಕರು ತಿರುಗುವುದೆಂದು ತೋರುತ್ತದೆ.

ಐದನೆ– ಅಷ್ಟೇ ಅಲ್ಲ, ಇನ್ನೂ ಇದೆ!

ಎರಡನೆ
ನಾಲ್ಕನೆ
ಆರನೆ
ಏಳನೆ
—ಏನು? ಏನು? ಏನು?

ಐದನೆ—ರುದ್ರಾಂಬೆಯನ್ನು ಹಿಡಿದರೆ ರಾಜಪುತ್ರನೂ ಲಿಂಗಣ್ಣ ಮಂತ್ರಿಗಳೂ ತಮ್ಮಷ್ಟಕ್ಕೆ ತಾವೇ ಕೈಗೆ ಬೀಳುವರೆಂದು ಆಕೆಯನ್ನು ಬಂಧಿಸಿ ತರಲು ಭಟರು ಹೋದರಂತೆ.

ಮೂರನೆ—ಯಾರು ಆಕೆ?

ಎರಡನೆ—ಅಯ್ಯೋ ಅದೂ ಗೊತ್ತಿಲ್ಲವೇ ನಿನಗೆ? ಮಂತ್ರಿಗಳ ಕುಮಾರ್ತೆ!

ಒಂದನೆ—ಸಾಕ್ಷಾತ್ ಪಾರ್ವತಿಯಂತಿದ್ದಾಳೆ.

ನಾಲ್ಕನೆ— ಅಯ್ಯೋ ಪಾಪ! ಆಕೆಗೇನು ಬಂತು ಕಷ್ಟ!

ಐದನೆ—ಆಕೆಯೂ ಪತ್ತೆ ಇಲ್ಲವಂತೆ!

ನಾಲ್ಕನೆ—ಸಾಕಪ್ಪಾ ಸಾಕು! ಹಾಲು ಕುಡಿದಂತಾಯ್ತು!

ಐದನೆ (ಕೈಯೆತ್ತಿ ಗುಂಪನ್ನು ಸಂಬೋಧಿಸಿ)-- ಸದ್ದು! ಸದ್ದು!

ಆರನೆ—ಸದ್ದು! ಸದ್ದು!

ಮೂರನೆ—ಸದ್ದು! ಸದ್ದು! (ಮತ್ತೆ ಸುಮ್ಮನಾಗುವರು.)

ಐದನೆ—ಈಗ ಅವರೆಲ್ಲರನ್ನೂ ಹುಡುಕುವುದಕ್ಕೆ ನಾನಾ ದಿಕ್ಕಿಗೆ ಭಟರನ್ನು ಅಟ್ಟಿದ್ದಾರೆ. ನಗರದಲ್ಲಿ ಎಲ್ಲಿಯಾದರೂ ಅಡಗಿಕೊಂಡಿದ್ದಾರೆಯೋ ಎಂದು ಸೈನಿಕರು ಮನೆಮನೆಗೂ ನುಗ್ಗಿ ನೋಡುತ್ತಿದ್ದಾರೆ.

ಎರಡನೆ—ಈ ಗಲಭೆಯಲ್ಲಿ ಯಾರು ಯಾರು ಶೂಲಕ್ಕೇರುತ್ತಾರೆಯೋ ಏನೋ?

ಮೂರನೆ—ನೀನೇನಾದರೂ ಸೇರಿದ್ದೀಯೋ ಈ ಪಿತೂರಿಗೆ?

ಎರಡನೆ (ಕೂಗಿ ರೇಗಿ)—ನಿನಗೇನಾದರೂ ಪಿತ್ತವೇರಿದೆಯೊ? ನೀನೆ ಸೇರಿರಬಹುದು ಪಿತೂರಿಗೆ. ಹೀಗೆಲ್ಲ ಹೇಳಿದರೆ ಹಲ್ಲು ಹೊಟ್ಟೆಗೆ ಹೋದಾವು! ಯಾರನ್ನಾದರೂ ಸಿಕ್ಕಿದ ಬಡಪಾಯಿಗಳನ್ನು ಶೂಲಕ್ಕೇರಿಸಿ ನೋಟ ನೋಡುವ ಜನಗಳು ನೀವು!

ಮೂರನೆ—ನಾನು ಹೋಗಿ ಹೇಳಿಯೇಬಿಡುತ್ತೇನೆ, ನೀನೂ ಸಂಚಿಗೆ ಸೇರಿದವನೆಂದು.

ಎರಡನೆ—ನಾನೂ ಹೇಳಿ ನಿನ್ನ ತಲೆಗೆ ತರುತ್ತೇನೆ. (ಇಬ್ಬರೂ ಹೋಗಲೆಳಸುವರು: ಐದನೆಯವನು ಇಬ್ಬರನ್ನೂ ತಡೆದು)

ಐದನೆ—ನಿಮಗೇನು ಭೂಮಿ ಬೇಜಾರಾಗಿದೆಯೆ? ಇಬ್ಬರ ತಲೆಯೂ ಹಾರಿ ಹೋಗುತ್ತದೆ! ನಿಮಗೆ ಹೆಂಡಿರು ಮಕ್ಕಳಿಲ್ಲವೆ?

ಮೂರನೆ—ನನಗಿದ್ದಾರೆ; ನಾನು ಹೋಗುವುದಿಲ್ಲ!

ಎರಡನೆ—ನನಗೂ ಇದ್ದಾರೆ! ಅವನ ಹುಮ್ಮಸ್ಸು ನೋಡಿ ರೇಗಿತಷ್ಟೇ!

ಐದನೆ—ಸಹೋದರರೇ, ನಿಮ್ಮೊಡನೆ ನಾನಾಡಬೇಕಾಗಿರುವ ಗುಟ್ಟೊಂದಿದೆ.

ಎಲ್ಲರೂ—ಏನು? ಏನು? ಹೇಳು! ಕೇಳುತ್ತೇವೆ!

ಐದನೆ—ಆದರೆ ನಿಮ್ಮಲ್ಲಿ ಗೂಢಚರರಾರೂ ಇಲ್ಲ ಎಂದು ಶಿವನ ಮೇಲೆ ಆಣೆ ಇಡಬೇಕು.

ಎಲ್ಲರೂ—ಶಿವನಾಣೆಗೂ ನಾನಲ್ಲ! ಶಿವನಾಣೆಗೂ ನಾನಲ್ಲ!!

ಐದನೆ—ಹಾಗಾದರೆ ಕೇಳಿ. ಸಹೋದರರೇ, ನಮ್ಮ ನಾಡಿನ ಕೀರ್ತಿ ಮುಳುಗುವ ಕಾಲ ಬಂದಿದೆ. ನಮ್ಮ ನಾಡು ಸುಡುಗಾಡಾಗುವ ಸಮಯವೊದಗಿದೆ. ರಮಣೀಯವೂ ಪರಮ ಪವಿತ್ರವೂ ಆಗಿರುವ ಈ ನಮ್ಮ ಹಿರಿಯರ ಹೆಮ್ಮೆಯ ಬೀಡು ನಮ್ಮೆಲ್ಲರ ಕಣ್ಣೆದುರಿಗೇ ಪಾಳುಬಿದ್ದು ಗೂಬೆಗಳ ಗೂಡಾಗಿ ಪಿಶಾಚಿಗಳ ನಾಟ್ಯರಂಗವಾಗುವ ವಿಷಮಕಾಲವೈತಂದಿದೆ. ನಾವೀಗ ತಟಸ್ಥರಾಗಿರುವುದು ನಮ್ಮ ಹೇಡಿತನಕೆ ಹೆಗ್ಗುರುತು. ನಿಮ್ಮಲ್ಲಿ ಪೌರುಷವಿದೆಯೇ? ಕೆಚ್ಚಿದೆಯೇ? ದೇಶಭಕ್ತಿಯಿದೆಯೇ?

ಎಲ್ಲರೂ—ಇದೆ! ಇದೆ! ಬಿದನೂರಿಗೆ ಜಯವಾಗಲಿ!

ಐದನೆ—ಬರಿಯ ಕೂಗಿನಿಂದ ಕಾರ್ಯಸಾಧನೆಯಾಗದು. ಜಯಕಾರ ಮಾಡಿದ ಮಾತ್ರದಿಂದ ಜಯಲಾಭವಾಗದು. ಬರಿಯ ಬಾಯ್ಗಲಿಗಳಾದರೆ ಸಾಲದು. ಕಯ್ಗಲಿಗಳಾಗಬೇಕು! ಮೈಗಲಿಗಳಾಗಬೇಕು!

ಎಲ್ಲರೂ—ಆಗುತ್ತೇವೆ! ಆಗಿದ್ದೇವೆ!

ಐದನೆ—ನಮ್ಮ ನಾಡಿನ ಈಗಿನ ವಿಷಮಾವಸ್ಥೆಯ ಪರಿಚಯವಾಗಿದೆಯೇ ನಿಮಗೆ?

ಎಲ್ಲರೂ—ಆಗಿದೆ! ಆಗಿದೆ!

ಐದನೆ—ಇಲ್ಲ; ನಿಮಗಿನ್ನೂ ಅದು ಸರಿಯಾಗಿ ತಿಳಿದಿಲ್ಲ. ನಾನು ತಿಳಿಸುತ್ತೇನೆ. ಕಣ್ದೆರೆಯುವಂತೆ ಮಾಡುತ್ತೇನೆ. ಇದು ರಾಜಬೀದಿ. ಇಲ್ಲಿ ಅದನ್ನೆಲ್ಲ ಹೇಳುವುದು ಈಗ ಸರಿಯಲ್ಲ. ಏಕೆಂದರೆ, ನಮ್ಮ ರಾಜಭಕ್ತಿಯೇ ಈಗ ರಾಜದ್ರೋಹವೆಂದು ಪರಿಗಣಿತವಾಗುವುದು. ಆದ್ದರಿಂದ ನೀವೆಲ್ಲರೂ ಕೆರೆಯ

ಬಳಿಯಿರುವ ಬಯಲಿನಲ್ಲಿ ಇಂದಿನ ರಾತ್ರಿಯೇ ಸದ್ದಿಲ್ಲದೆ ಸೇರಬೇಕು. ಇತರರನ್ನೂ ಕರೆತರಬೇಕು.

ಎಲ್ಲರೂ—ಆಗಲಿ! ಆಗಲಿ!

ಐದನೆ—ಅಲ್ಲಿ ನಿಮಗೆಲ್ಲವನ್ನೂ ವಿಶದವಾಗಿ ಹೇಳುತ್ತೇನೆ. ಈಗ ಹೋಗಬಹುದು.

(ಜನರು ಗದ್ದಲ ಮಾಡುತ್ತ ಹೋಗುವರು. ನಾಲ್ಕೈದು ಜನರು ಉಳಿಯುವರು. ಒಳಗಡೆ 'ಹುಚ್ಚೀ! ಹುಚ್ಚೀ!' ಎಂಬ ಕೂಗು ಕೇಳಿಬರುತ್ತದೆ.)

ಒಂದನೆ—ಅದೇನದು ಕೂಗು?

ನಾಲ್ಕನೆ—ಯಾರೋ ಹುಚ್ಚಿ!

ಮೂರನೆ—ಅಯ್ಯೋ ಎಷ್ಟು ವಿಕಾರವಾಗಿದ್ದಾಳೆ!

(ರುದ್ರಾಂಬೆ ಹುಚ್ಚಿಯಂತೆ ವಿಕಾರವಾದ ಛದ್ಮವೇಷವನ್ನು ಧರಿಸಿ ಬರುವಳು. ಜನರೆಲ್ಲ ಹೆದರಿ ದೂರ ನಿಲ್ಲುತ್ತಾರೆ.)

ರುದ್ರಾಂಬೆ—ನರಕ! ನರಕ!! ಅಯ್ಯೋ ನರಕ!!!
ನಮ್ಮೂರು ನರಕ! ನಮ್ಮೂರು ನರಕ!!
ನಾನು ಯಮನಿಗೆ ಸಾಕ್ಷಿ!
ನಾನು ರಕ್ತಾಕ್ಷಿ!! (ಕಿಲಕಿಲ ನಕ್ಕು ಮತ್ತೆ ಅಳುವಳು.)
ಬೇಡ, ಬೇಡೆಲೆ ಹಾಳು ಯಮದೂತ; ಅಯ್ಯೋ
ನನ್ನ ನಗ್ನಿಗೆ ತಳ್ಳುವರು! (ಒದೆಯುವಳು. ನಗುವಳು.)
ಹಾಗೆ ಬೀಳಲ್ಲಿ! ಸಾಯಿ! ಸಾಯಿ!! (ಕೂಗುತ್ತ)
ಬನ್ನಿ! ಬನ್ನಿ! ಎಲ್ಲರೂ ಬನ್ನಿ!
ನರಕದಲಿ ವಿಪ್ಲವ! ನರಕದಲಿ ದಂಗೆ!
ಓ ಪಾಪಿಗಳೆ ಏಳಿ, ಎದ್ದೇಳಿ!
ಯಮದೂತರನು ಸೀಳಿ!
ಬನ್ನಿ! ಬನ್ನಿ! (ಕುಣಿದು ಹಾರುವಳು.)
ಸಿಕ್ಕಿದನು ಯಮ! ಸಿಕ್ಕಿದನು ಯಮ!
ಶೂಲಕೇರಿಸಲು ಬನ್ನಿ! ಬನ್ನಿ! ಬೇಗ ಬನ್ನಿ!!
(ನಕ್ಕು ಮೌನವಾಗಿ ಸುತ್ತ ದುರುದುರು ನೋಡಿ)
ಏನು ಊರಿದು ಯಮನ ತವರೂರು!—
ಯಾರಲ್ಲಿ? ಆ ಬೆಂಕಿಯ ನಡುವೆ?—(ಕೈತೋರಿ)
ಬಾ ತಂಗಿ, ಬಾ!—(ಕೈಚಾಚಿ ಹಿಂಜರಿದು)

ಅಯ್ಯೋ ಬಾಲವಿಧವೆ? (ಅಳುತ್ತ)
ಯಾರ ಪಾಪಕೆ ನಿನ್ನನಿಲ್ಲಿಗೆಳೆದರಮ್ಮ ?—
ನಾನಾರು ಎಂದೆಯಾ ?—
ನರಕದ ದ್ವಾರಪಾಲಕಿ !!  (ಹೋ ಎಂದು ಕೂಗಿ ಸುಮ್ಮನಾಗಿ)
ಮತ್ತಿದಾರಿದು ಬಾಗಿಲನು ತಟ್ಟುವರು?

(ಬಾಗಿಲು ತೆಗೆಯುವಂತೆ ಅಭಿನಯಿಸಿ)

ಅಯ್ಯೋ ನೀನೂ ಬಂದೆಯಾ ?—
ಬಾ, ಮಗೂ ಬಾ. ಹೆದರಬೇಡ !—

(ಕೈನೀಡಿ ಮಗು ಬಂದಂತೆ ಅಭಿನಯಿಸಿ)

ಈಗತಾನೆ ಬಂದೆಯಾ ಭೂಮಿಯಿಂದ? (ಮುತ್ತಿಟ್ಟು)—
ಅದೇಕೆ? ಇಷ್ಟು ಬೇಗ ಬಂದೆ? (ಆಲಿಸಿ ತಲೆದೂಗಿ)
ಹೆತ್ತವಳು ಕತ್ತುಹಿಸುಕಿ ಹೊಳೆಗೆಸೆದಳೆ?—

(ನಿಟ್ಟುಸಿರು ಬಿಟ್ಟು ಅಳುವಳು.)

ಅಯ್ಯೋ ಪಾಪ!—ಹೆದರದಿರು ಕಂದಾ!

(ಯಾರನ್ನೋ ತಡೆಯುವಂತೆ ನಟಿಸಿ)

ಇಲ್ಲ; ನಾನು ಬಿಟ್ಟುಕೊಡುವುದಿಲ್ಲ!
ನನ್ನದು ಈ ಮಗು! (ಉಗುಳುವಳು.)
ಥೂ! ನಿಮ್ಮ ಹಾಳಾಗ! ಹತ್ತಿರ ಬರಬೇಡಿ!

(ಪುನಃ ಮಗುವನ್ನು ಸಂತೈಸುವಳು.)

ಅಳಬೇಡ ಕಂದಾ! ನಾನಿದ್ದೇನೆ! (ಕಿಟ್ಟನೆ ಚೀರಿ)
ಅಯ್ಯೋ! ನನ್ನ ಕಂದನನ್ನು ಕಸಿದರು!
ಪಾಪಿ! ಪಾಪೀ! ಪಾಪೀ!! ಈ ಈ ಈ!!

(ಬಿದ್ದು ರೋದಿಸಿ ಹೊರಳಿ ಎದ್ದು ರೌದ್ರದಿಂದ)

ನಾನು ರಕ್ತಾಕ್ಷಿ! ನಾನು ರಕ್ತಾಕ್ಷಿ!
ಮಗೂ ಹೆದರಬೇಡ! ಬಂದೇ! ಬಂದೇ! (ಓಡುವಳು.)

ಒಂದನೆ—ಇದೇನು ಹುಚ್ಚಿದು?
ಮೂರನೆ—ನನಗೆ ಜ್ವರ ಬಂದಿದೆ!
ನಾಲ್ಕನೆ—ಏನೋ ಪಿಶಾಚಿ ಹಿಡಿದಿರಬೇಕು.

ಐದನೆ—ಏನೋ ರಕ್ತಾಕ್ಷಿಯಂತೆ ಅದರ ಹೆಸರು. ನರಕದ ಪಿಶಾಚಿಯಿರಬೇಕು.

ಎರಡನೆ—ಅಂತೂ ಎಲ್ಲಿ ಯಾರನ್ನು ಒದ್ದು ಓಡಿಸಿದರೂ ಎಲ್ಲರೂ ಈ ಭೂಮಿಗೆ ನುಗ್ಗಿ ಬಂದುಬಿಡುತ್ತಾರೆ. ಇದೇನು ಉಗ್ರಾಣವೋ ಅಥವಾ ಕಸದ ಬುಟ್ಟಿಯೋ ನನಗೆ ಬೇರೆ ತಿಳಿಯುವುದಿಲ್ಲ!

ಐದನೆ—ಅಲ್ಲಿ ನೋಡಿ, ಕಾವಲುಗಾರ ಸಿಂಗಣ್ಣನನ್ನು ಒದ್ದು ಒದ್ದು ತರುತ್ತಿದ್ದಾರೆ ರಾಜಭಟರು. ನಾವಿಲ್ಲಿರುವುದು ಚೆನ್ನಾಗಿಲ್ಲ.

ಮೂರನೆ—ಹೌದು; ಕಳ್ಳರ ಕಣ್ಣಿಗೆ ಕಾಣಿಸಿಕೊಳ್ಳುವುದೆ ತಪ್ಪು. ಆಮೇಲೆ ನಮ್ಮನ್ನೂ ತಪ್ಪಿಗೆಳೆದುಬಿಟ್ಟರೆ ಕಷ್ಟ.

(ಜನರೆಲ್ಲ ಹೋಗುವರು. ಇಬ್ಬರು ರಾಜಭಟರು ಸಿಂಗಣ್ಣನನ್ನು ಎಳೆದುಕೊಂಡು ಬರುವರು.)

ಒಂದನೆ—ಇವನಿಗೇನು ಮಾಡಬೇಕಾಯ್ತು? ಬಾಯಿ ಬಿಡುವುದೇ ಇಲ್ಲವಲ್ಲ.

(ರಪ್ ರಪ್ ಹೊಡೆಯುವನು.)

ಸಿಂಗಣ್ಣ—ಅಯ್ಯೋ ಸಾಕಪ್ಪಾ ಕೈಲಾಸ! (ಕೂಗುವನು.)

ಎರಡನೆ—ಹಾಳು ಮುಂಡೆಯದು, ಕೈಲಾಸ, ಶಿವ ಎನ್ನುತ್ತಿದೆಯೇ ಹೊರತು ಬೇರೆ ಮಾತೇ ಇಲ್ಲ! ಹೇಳೋ! ನಿನ್ನ ತಲೆಗೆ ಒರಲೆ ಹಿಡಿಯಾ! (ಗುದ್ದುವನು.)

ಸಿಂಗಣ್ಣ—ಅಯ್ಯೋ ಸಾಕಪ್ಪಾ ಸಮಾಧಿ, ಸಾಕಪ್ಪಾ! (ಒರಲುವನು.)

ಒಂದನೆ—ಇವನನ್ನು ಜೀವಸಹಿತ ಕುತ್ತಿಗೆವರೆಗೆ ಹೂಳಿ, ತಲೆಯ ಮೇಲೆ ಒಂದು ದೊಡ್ಡ ಬೋಗುಣಿ ಮಗುಚಿಹಾಕಿ ಅದರೊಳಗೆ ಮೆಣಸಿನಕಾಯಿ ಹೊಗೆ ಹಾಕಿದರೆ ಆಗ ಸರಿಯಾಗಿ ಮಾತಾಡುತ್ತಾನೆ! ಬಾ! ಬಾ!

(ಕೆನ್ನೆಗೆ ಹೊಡೆಯುವನು.)

ಸಿಂಗಣ್ಣ—ಅಯ್ಯೋ ನನಗೆ ಇಷ್ಟೇ ವರಗಳು ಸಾಕಪ್ಪಾ!

ಎರಡನೆ—ನಡೆ, ನಿಮ್ಮಪ್ಪನ ಮನೆಗೆ ಕೈಲಾಸಕ್ಕೆ ಹೋಗುವೆಯಂತೆ!

(ಹೊಡೆದು ಗುದ್ದುತ್ತ ತಬ್ಬಿಕೊಂಡು ಹೋಗುವರು.)

[ಪರದೆ ಬೀಳುವುದು.]

## ದೃಶ್ಯ ೨

(ಒಂದು ದಟ್ಟಡವಿಯ ನಡುವಣ ಹಾದಿ. ಬಸವಯ್ಯ, ಶಿವಯ್ಯ ಬರುವರು.)

ಬಸವಯ್ಯ— ಶಿವಯ್ಯ,

ಕರುಬರಿದ್ದೂರಿಂದೆ ಕಾಡೊಳ್ಳಿತೆಂಬಂತೆ
ಬಿದನೂರಿಗಿಂತಲೂ ಭವ್ಯ ಭಯಂಕರವಾದ

ಈ ರಮ್ಯ ಪರ್ವತಾರಣ್ಯಗಳಿ ಲೇಸಲ್ತೆ ?
ನೋಡು, ಈ ತೊರೆಯೆಂತು ಕಲ್ಗಳೊಡನೆ ಗಳಪುತೆ,
ನೊರೆಗರೆದು, ಸುಳಿಸುತ್ತೆ, ಹಾರುತ್ತೆ, ಜಾರುತ್ತೆ
ಹರಿಯುತಿದೆ! ಈ ಮಹಾವೃಕ್ಷಂಗಳಾದರೋ
ಧೀರ ಸೌಂದರ್ಯವನು ತೋರುತ್ತೆ, ನೆಲದೆಡೆಗೆ
ಬಿಸಿಲು ಬೀಳದ ತೆರದೆ ತಮ್ಮಯ ತಳಿಗೊಡೆಯ
ನೆಳಲಿನಿಂದೀ ಬಸಕೆ ಕತ್ತಲೆಯ ಮೆತ್ತಿಹವು!
ಈ ಪರ್ವತಗಳಲ್ಲಿ, ಈ ಅರಣ್ಯಗಳಲ್ಲಿ
ಪವಡಿಸಿಹ ಶಾಂತಿ ನಮ್ಮೆದೆಗಳಿಗೆ ಬರಬಾರವೆ?—
ಬಾ, ತೊರೆಯ ಬಳಿಯಿಹ ಬಂಡೆಗಳ ಮೇಲೆ ಕುಳಿತು
ಮಾರ್ಗದಾಯಾಸವನು ಪರಿಹರಿಸಿಕೊಳ್ಳುವಂ.—
ಕುದುರೆಗಳು ಆ ನೆಳಲಿನಲಿ ನಿಂತು ಮೇಯಲಿ.—
ನೀನೇನನೋ ಕುರಿತು ಚಿಂತೆಗೈವಂತಿದೆ!

ಶಿವಯ್ಯ— ಏನಾದರೇನಂತೆ? ನನ್ನ ಚಿಂತೆ . . . ನಿನಗೆ
ಹಿತವಲ್ಲ; ಹೇಳುವೆನೆ . . . ನಿನಗೆ ರುಚಿಕರವಲ್ಲ.

ಬಸವಯ್ಯ— ಏನದು? ನನ್ನಲ್ಲಿ ಮುಚ್ಚುಮರೆಯೇಕೆ?

ಶಿವಯ್ಯ— ನಿನ್ನಂತೆ ಕಷ್ಟದಲ್ಲಿಯು ಕೂಡ ಕಾಡುಗಳ
ಕಂಡೊಡನೆ, ಎಲ್ಲವನು ಮರೆತು, ಸೌಂದರ್ಯವನು
ಇಂತು ಬಣ್ಣಿಸಲೆನಗೆ ಹೃಚ್ಛಕ್ತಿಯಿಲ್ಲ.—
ಹೊನ್ನಯ್ಯ ಲಿಂಗಣ್ಣ ಮಂತ್ರಿಗಳು ನಮಗೇಕೆ
ದಾರಿಯಲಿ ಸಿಕ್ಕಲಿಲ್ಲೆಂದು ಚಿಂತಿಸುತಿದ್ದೆ.

ಬಸವಯ್ಯ— ಮುಂದೆ ಹೋಗಿರಬಹುದು.

ಶಿವಯ್ಯ— ಇಲ್ಲ, ಹೋದಂತಿಲ್ಲ.
ಈ ತೊರೆಯ ಕೆಸರಿನಲಿ ಹಜ್ಜೆಗಳ ಗುರುತಿಲ್ಲ;
ಕಾಲುಹಾದಿಯ ಇಕ್ಕೆಲದ ಗಿಡಗಳುರುಳಿಲ್ಲ;
ಇನ್ನಾವುದೂ ಸ್ಥೂಲಚಿಹ್ನೆ ತೋರುವುದಿಲ್ಲ. (ಸುಯ್ಯಲು)

ಬಸವಯ್ಯ— ಏಕಿಂತು ಸುಯ್ಯುತಿಹೆ? ನಿನ್ನ ದನಿ ಏನನೋ
ಮುಚ್ಚುಮರೆಮಾಡುತಿದೆ! ನಿನ್ನೆದೆಯೊಳಾವುದೋ
ಕಿಚ್ಚೆದ್ದ ರಾಗವೊಂದುಣ್ಮುವಂತಿಹುದು!

ಶಿವಯ್ಯ— ಅವರೇಕೆ ನಮಗೆ ದಾರಿಯಲಿ ಸಿಗಲಿಲ್ಲ?

ಬಸವಯ್ಯ— ಮುಂದೆ ಹೋಗಿರಬಹುದು! ನಮಗಿಂತ ಮುನ್ನವೇ
ಬಂದರಲ್ಲವೆ ಅವರು?

ಶಿವಯ್ಯ— ಇಲ್ಲ. ಈ ಹಾದಿಯಲಿ
ಮುಂದವರು ತೆರಳಿಲ್ಲ.

ಬಸವಯ್ಯ— ಹಿಂದೆ ಬರುತಿರಬಹುದು.

ಶಿವಯ್ಯ— ಹಿಂದೇಕೆ ಬರುತಿಹರು, ನಮಗಿಂತಲೂ ಮುಂದೆ
ಹೊರಟವರು?

ಬಸವಯ್ಯ— ಬೇರೆ ಬಟ್ಟೆಯ ಹಿಡಿದು ಹೋದರೋ
ಏನೋ?

ಶಿವಯ್ಯ— ನನಗದೇ ಸಂದೇಹ! ಬಸವಯ್ಯ!
ಬೇರೆ ಬಟ್ಟೆಯ ಹಿಡಿದರೆಂಬುದೇ ಸಂದೇಹ!

ಬಸವಯ್ಯ— ಹಿಡಿದರೇನಾಯ್ತು? ಶಿವಮೊಗ್ಗೆಯಲ್ಲವರ
ಕಾಣುವೆವು.

ಶಿವಯ್ಯ— ನನಗದೂ ಸಂದೇಹ.

ಬಸವಯ್ಯ— ಏಕೆ?

ಶಿವಯ್ಯ— ಸಂನ್ಯಾಸಿ ಎಂದುದನು ನೀನು ಕೇಳಿರುವೆ.
ಹಾದಿ ತಪ್ಪಲು ಅವರಿಗವಕಾಶವೆಲ್ಲಿಹುದು?
ಬೇರೆ ಹಾದಿಯ ಹಿಡಿದರವರು, ಶಿವಮೊಗ್ಗೆಗೆ
ಬರಲ್ಕಲ್ಲ.

ಬಸವಯ್ಯ— ಮತ್ತೆತ್ತ ಹೋಗುವರು, ಶಿವಯ್ಯ?

ಶಿವಯ್ಯ— ನನಗೇತಕಾ ವಿಷಯ?

ಬಸವಯ್ಯ— ಹೇಳು, ಶಿವಯ್ಯ!

ಶಿವಯ್ಯ— ನೀನು ನಂಬುವುದಿಲ್ಲ.

ಬಸವಯ್ಯ— ನೀನು ಹೇಳಲೆಬೇಕು.

ಶಿವಯ್ಯ— ಸುದ್ದಿ ಇಂಪಾಗಿಲ್ಲ.

ಬಸವಯ್ಯ— ಆದರೂ ಹೇಳಿಬಿಡು.
ಸಂಶಯಕ್ಕಿಂತಲೂ ಕಹಿಸುದ್ದಿ ಮೇಲು!

ಶಿವಯ್ಯ— ನೀನೆ ಊಹಿಸಲಾರೆಯಾ? ಹೇಳು!

ಬಸವಯ್ಯ— ಅಯ್ಯೋ
ಬರಿದೆ ಪೀಡಿಸುತಿರುವೆ, ನನ್ನ ಬಗೆ ಏನೇನೊ
ಭೀಕರವ ನೆನೆಯುತಿದೆ.

ಶಿವಯ್ಯ— ಹಾಗಾದರದೆ ಸ್ವರ್ಗ !
ನಾಸೀಗಳೊರೆಯುವುದಕಿಂತಲೂ ಮಿಗಿಲಾದ
ಭೀಕರವ ನೀನೆಂದಿಗೂ ಸೆಸೆಯಲಾರೆ !
ಆಗಲಿ—ನಿನ್ನ ಹಿತಕಾಗೆಲ್ಲವನು ಹೇಳಿ
ಹಗುರಗೈವೆನು ನನ್ನ ಎದೆಹೊರೆಯನಿಳಿಸಿ.
ಬಾ, ಇಲ್ಲಿ ಕುಳಿತುಕೊ (ಇಬ್ಬರೂ ಬಂಡೆಯ ಮೇಲೇರುವರು)
ತಾಳ್ಮೆಯಿಂದಾಲಿಸು.—
ಯಾರನೂ ನಂಬದಿರು. ಗೆಳೆಯನಾದರು ಸರಿಯೆ,
ಒಪಳಾದರು ಸರಿಯೆ, ಯಾರನೂ ನಂಬದಿರು.
ಈ ಭೂಮಿ ಸ್ವಾರ್ಥತೆಯ ಬೀಡೆಂದು ತಿಳಿ. ಬರಿದೆ
ಗಂಧರ್ವಲೋಕದಲಿ ತೊಳಲಿದರೆ ನೀನೆಂದೂ
ಈ ಪಾಪಮಯ ಲೋಕದಲಿ ಬಾಳಲಾರೆ.
ನನಗಿಂತಲೂ ನೀನು ತಿಳಿದವನು ; ಮೇಧಾವಿ ;
ಭಾವುಕ. ಆದರೆ ನಿನ್ನ ಸರಳತೆ ನಿನಗೆ
ಕುರುಡಿನಂತಿದೆ. ಎಲ್ಲರನಿವಾತನೂ ನಂಬಿ
ಮೋಸಹೋಗಿರುವೆ.—ಇಂತೇಕೆ ನಾನು
ನೀತಿಬೋಧೆಯ ಮಾಡುತಿಹೆನೆಂದು ಸೋಜಿಗವೆ ?
ನಿನಗೆ ನಚ್ಚಿನ ಗೆಳೆಯನಾಗಿದ್ದ ಹೊನ್ನಯ್ಯ
ನಿನಗೇನನೆಸಗಿಹನೂ ಬಲ್ಲೆಯೇನದನು ?

ಬಸವಯ್ಯ—ನೀನೆ ಹೇಳಿದೆಯಲ್ಲವೇ, ಅವನ ಸಾಹಸವೆ
ನಮ್ಮ ಬಿಡುಗಡೆಗೆ ಕಾರಣವೆಂದು. ನಾನೆಂದೂ
ಆತನಿಗೆ ಚಿರಋಣಿ. ಆತನಿಂದೇ ನನಗೆ
ನಿಜದ ನೆಲೆ ತೋರಿಹುದು.

ಶಿವಯ್ಯ (ವ್ಯಂಗ್ಯವಾಗಿ ನಕ್ಕು)—ರುದ್ರಾಂಬೆ ಇಲ್ಲದಿರೆ
ಅವನೆನಗೆ ಕಾರ್ಯದಲ್ಲಿ ನೆರವಾಗುತಿದ್ದನೇ ?

ಬಸವಯ್ಯ—ಓ ಚೆಲುವೆ, ನಿನಗೆ ನಾನಾವಗಂ ಚಿರಋಣಿ.
ನಿನ್ನೊಲ್ಮೆಯೇ ನನಗೆ ಈ ವಿಷಮ ಸಮಯದಲಿ
ಜೀವಾತುವಾಗಿಹುದು !

ಶಿವಯ್ಯ (ನಕ್ಕು)— ಅಯ್ಯೋ ಮರುಳ್ತನವೆ !
ಓ ಮಾನವಾ, ನೀನು ಸ್ತ್ರೀಯರಿಂದೆಂತೆಂತು
ಮೋಸಹೋಗುತ್ತಿರುವೆ ? ಓ ಪ್ರೇಮವೇ, ನಿನ್ನ

ಲೀಲೆಯೋ ಲೀಲೆ! ಮಾಟಗಾರನ ಮುಂದೆ
ಕುಣಿವ ಮಾಯೆಯ ಗೊಂಬೆಗಳ ತೆರದಿ ಮಾನವರು
ನಿನ್ನ ಕಾಪಟ್ಯದಲಿ ಕುರುಡಾಗಿ ಕುಣಿಯುವರು!—
ಬಸವಯ್ಯ, ನಿನ್ನ ಸವಿಗನಸದನು ನಾನೇಕೆ
ಒಡೆಯಲಿ?

ಬಸವಯ್ಯ— ಶಿವಯ್ಯ, ನೀನೆನ್ನ ನಣಕಿಸುತಿರುವೆ.

ಶಿವಯ್ಯ— ನಾನಲ್ಲ! ರುದ್ರಾಂಬೆ ಹೊನ್ನಯ್ಯರೆಂಬುವರೆ
ನಿನ್ನ ನಣಕಿಸುತಿಹರು.

ಬಸವಯ್ಯ (ಮುನಿದು)— ಏನದು? ಒದರಿಬಿಡು!

ಶಿವಯ್ಯ— ನನ್ನ ಮೇಲೇಕಯ್ಯ ಕೋಪಗೊಳ್ಳುತ್ತಿರುವೆ?
ರುದ್ರಾಂಬೆ ಹೊನ್ನಯ್ಯನನು ಇನಿಯನೆಂದೊಲಿದು
ಲಿಂಗಣ್ಣ ಮಂತ್ರಿಯನು ಬಿಡಿಸಿದಳು! ನಾನು
ಸ್ನೇಹಿತನು ಎಂದು ನಿನ್ನನು ಬಿಡಿಸಿದುದೆ ತಪ್ಪೆ?

ಬಸವಯ್ಯ (ರಭಸದಿಂದ)— ಏನು? ಏನು?

ಶಿವಯ್ಯ— ಬಸವಯ್ಯ, ನೀನು ಕಲಿತವನು;
ಲೋಕವೆಂಬುದು ಮಾಯೆ ಎಂದರಿತ ಸುಜ್ಞಾನಿ.
ಪ್ರೇಮದೀ ಚಂಚಲತೆಯನು ಕಾವ್ಯಗಳೋದಿ
ತಿಳಿದವನು. ಸ್ತ್ರೀ ಸಹಜವಾದುದನೆ ರುದ್ರಾಂಬೆ
ಮಾಡಿದಳು; ಹೊನ್ನಯ್ಯನೂ ಅಂತೆ ಎಂದರೆ.—
ರಾಜ್ಯಸಂಸ್ಥಾಪನೆಯ ಕಾರ್ಯದಲಿ ತೊಡಗಿರುವ
ನೀನಿಂತು ಒಬ್ಬ ಹೆಣ್ಣಿನ ಕಪಟಕಳಲೇಕೆ?
ರುದ್ರಾಂಬೆ ಎಂಬೊಬ್ಬಳಿದ್ದುದನೆ ಮರೆತುಬಿಡು!

ಬಸವಯ್ಯ—ಮರೆಯುವುದೆ? ಎಂದಿಗೂ ಇಲ್ಲ, ಶಿವಯ್ಯ.
ರುದ್ರಾಂಬೆ ನನಗಿಂತು ದ್ರೋಹಗೈದುದನು
ನಾನವಳ ಬಾಯಿಂದೆ ಕೇಳಿದಲ್ಲದೆ ನಂಬೆ.
ಹೊನ್ನಯ್ಯನಾವುದೋ ಬಲಾತ್ಕಾರದಿಂದಲೇ
ರುದ್ರಾಂಬೆಯನೊಪ್ಪುವಂತೆ ಮಾಡಿರಬೇಕು.
ಹೈದರಾಲಿಯ ಸಹಾಯವನು ಪಡೆದಾನು
ಚೆಲುವಾಂಬೆ ನಿಂಬಯ್ಯರನು ಹಿಡಿದು ಶಿಕ್ಷಿಸಿ,
ತರುವಾಯ ಹೊನ್ನಯ್ಯನನು ವಿಚಾರಿಸಿ ತಿಳಿದು,
ಶಿಕ್ಷಿಸುವೆ.—ಹೊನ್ನಯ್ಯನೂ ಕೂಡ ನನಗಿಂತು

ದ್ರೋಹಮಾಡುವನೆಂದು ನಾ ನಂಬಲಾರೆ.—
ಏನೋ ಅಚಾತುರ್ಯವಿರಬೇಕು ಇದರಲ್ಲಿ!
ದುಡುಕಿದರೆ ದುಗುಡಪಡಬೇಕಾಗುವುದು ಕಡೆಗೆ.—
ಎಷ್ಟು ತೊಡಕಿರುವುದೀ ಲೋಕದಲಿ, ಶಿವಯ್ಯ!

(ಚಿಂತಾಮಗ್ನನಾಗುವನು.)

ಶಿವಯ್ಯ (ಸ್ವಗತ)—ಓಹೊ, ಈ ಕಪಟವಿವನಲ್ಲಿ ಸಾಗಲಾರದು.
ಎಂತಾದರೂ ಇವನು ರುದ್ರಾಂಬೆಯನು ಬಿಡನು.—
ಇರಲಿ; ಇವನಸು ಕೊಂದೆ ಕೆಲಸ ಕೈಗೂಡಿಸುವೆ!

ಬಸವಯ್ಯ (ಹಿಂದಿರುಗಿ ಕೆಳಗೆ ನೋಡಿ)—ಶಿವಯ್ಯ, ಈ ಪ್ರಪಾತದಾಳಕ್ಕಿಂತಲೂ ಗಭೀರತರ ಜೀವನದಾಳ! ಅಲ್ಲವೇ?

ಶಿವಯ್ಯ (ನೋಡಿ)—ಹೌದು; ಎಷ್ಟು ಭಯಂಕರವಾಗಿದೆ! ಅಲ್ಲಿರುವ ಮಹಾವೃಕ್ಷಗಳೂ ಕೂಡ ಈ ಎತ್ತರಕ್ಕೆ ಸಣ್ಣ ಗಿಡಗಳಂತೆ ತೋರುತ್ತಿವೆ. ನೋಡು, ಆ ದೊಡ್ಡ ಬಂಡೆಗಳು!

ಬಸವಯ್ಯ—ಎಷ್ಟು ಗುಂಡಾಗಿವೆ! ಸಣ್ಣ ಹರಳುಗಳಂತೆ ಕಾಣುತ್ತಿವೆ. ದೂರದಾ ಕಂದರವೂ ಚಿತ್ರಾರ್ಪಿತ ದೃಶ್ಯದಂತೆ ರಮಣೀಯ.

ಶಿವಯ್ಯ—ಆದರೂ ರುದ್ರ!

ಬಸವಯ್ಯ—ಪಾಪ, ಅರಿಯದ ಪ್ರಾಣಿಗಳು ಇಲ್ಲಿಂದ ಕೆಳಗೆ ಬಿದ್ದರೆ ಎಲುಬೆಲ್ಲ ನುಚ್ಚುನೂರೆ!

ಶಿವಯ್ಯ (ಕೆಳಗೆ ನೋಡುತ್ತ)—ಓಹೊ ಒಂದು ಜಿಂಕೆ! (ಬಾಗಿ ನೋಡುವನು.)

ಬಸವಯ್ಯ—ಎಲ್ಲಿ?

ಶಿವಯ್ಯ—ಚೆನ್ನಾಗಿ ಬಾಗಿ ನೋಡು. ಆ ಹೆಮ್ಮಾವಿನ ಮರದ ಪಕ್ಕದ ಕಿರುಬಯಲಿನಲ್ಲಿ!

ಬಸವಯ್ಯ (ತಲೆಯುಡೆಯನ್ನು ಕೆಳಗಿಟ್ಟು ಬಾಗಿ ನೋಡುತ್ತ)—ಎಲ್ಲಿ? ನನಗೆ ಕಾಣುವುದಿಲ್ಲ!—

(ಶಿವಯ್ಯನು ಬಸವಯ್ಯನನ್ನು ಥಕ್ಕನೆ ಪ್ರಪಾತಕ್ಕೆ ತಳ್ಳುತ್ತಾನೆ.)

ಅಯ್ಯೋ—

ಶಿವಯ್ಯ—ನಿನಗಿದೇ ಮೋಕ್ಷ. ನಾನಿನ್ನು ಶಿವಮೊಗ್ಗೆಗೆ, ಮುಂದಿನ ಕಾರ್ಯಸಾಧನೆಗೆ. (ರೋದನ ಕೇಳಿಸುವುದು.) ಇನ್ನೂ ಜೀವದಿಂದಿದ್ದಾನೆಯೆ? ಆಶ್ಚರ್ಯ! (ಬಾಗಿ ನೋಡುವನು.) ಇನ್ನೇನು ಸಾಯುವನು! (ಪಕ್ಕದ ಕಲ್ಲುಗುಂಡೊಂದನ್ನು ನೋಡಿ) ಇದನ್ನು ಎತ್ತಿಹಾಕಿದರಾಯ್ತು! (ಎತ್ತುತ್ತಿರುವನು.

ಖುರಪುಟ ಧ್ವನಿ ಕೇಳಿಸುವುದು. ಅದನ್ನು ಅಲ್ಲಿಯೇ ಬಿಟ್ಟು ಎದ್ದು ಆಲಿಸುವನು.) ಇದೇನಿದು ಖುರಪುಟ ಧ್ವನಿ? ಯಾರೋ ರಾಹುತರು! ಇರಲಿ, ಸದ್ಯಕ್ಕೆ ಇಲ್ಲಿ. . .

(ಒಂದು ಪೊದೆಯಲ್ಲಿ ಅವಿತುಕೊಳ್ಳುವನು. ಹೊನ್ನಯ್ಯ, ಲಿಂಗಣ್ಣ ಮಂತ್ರಿಗಳು ಪ್ರವೇಶಿಸುವರು.)

ಹೊನ್ನಯ್ಯ—ನನಗೆ ಕೇಳಿಸಿತು, ಚೆನ್ನಾಗಿ. 'ಅಯ್ಯೋ' ಎಂದು ಒರಲಿದಂತಾಯ್ತು!

ಲಿಂಗಣ್ಣ—ನನ್ನ ಕಿವಿಯೂ ಮಂದ. ಜೊತೆಗೆ ಈ ಜೀರ್ದುಂಬಿಗಳ ಕೀರುಲ ಬೇರೆ!

(ರೋದನ ಧ್ವನಿ)

ಹೊನ್ನಯ್ಯ—ಅದೋ ! ಪುನಃ ! ಅದೇ ಕೂಗು !

ಲಿಂಗಣ್ಣ—ಎತ್ತಣಿಂದ!

ಹೊನ್ನಯ್ಯ—ಇತ್ತಕಡೆಯಿಂದ (ಹೋಗಿ ಪ್ರಪಾತವನ್ನು ನೋಡಿ) ಏನು ಭಯಾನಕವಾಗಿದೆ ಈ ಪ್ರಪಾತ!

ಲಿಂಗಣ್ಣ (ನೋಡಿ ಹಿಂದಕ್ಕೆ ಬಂದು)—ಅಯ್ಯೊ ನನ್ನ ಮುದಿತಲೆ ತಿರುಗುತ್ತದೆ! ನಾ ನೋಡಲಾರೆ!

ಹೊನ್ನಯ್ಯ (ಆಲಿಸಿ)—ಪುನಃ ! ಅಯ್ಯೊ ಪುನಃ ಅದೇ ಕೂಗು, ಮಂತ್ರಿಗಳೆ! ಯಾರೋ ಬಿದ್ದಿರಬೇಕು ಇಲ್ಲಿ!

ಲಿಂಗಣ್ಣ—ಅಲ್ಲಿ ನೋಡು, ಎರಡು ಕುದುರೆ!

ಹೊನ್ನಯ್ಯ—ಶಿವಯ್ಯ ಬಸವಯ್ಯರು ಏರಿಬಂದವು!

ಲಿಂಗಣ್ಣ—ಹಾಗಾದರೆ ಏನೋ ಪ್ರಮಾದ ನಡೆದಿದೆ!

ಹೊನ್ನಯ್ಯ—ನನ್ನೆದೆಯೇಕೋ ತಲ್ಲಣಿಸುತ್ತಿದೆ! (ನೋಡಿ) ಅಯ್ಯೊ ಬಸವಯ್ಯನ ತಲೆಯುಡುಗೆಯಿದು!

ಲಿಂಗಣ್ಣ (ನೋಡಿ ತೆಗೆದುಕೊಂಡು)—ಹೌದು! ಶಿವ ಶಿವಾ! ಕಾಪಾಡು!

ಹೊನ್ನಯ್ಯ (ಆಲಿಸಿ)—ಪುನಃ ಅದೇ ಧ್ವನಿ! ಬನ್ನಿ, ಹೋಗಿ ನೋಡೋಣ.

ಲಿಂಗಣ್ಣ—ಅಲ್ಲಿಗೆ ಇಳಿಯುವುದಾದರೂ ಹೇಗೆ!

ಹೊನ್ನಯ್ಯ—ಆ ಕಡೆ ಇಳಿಯಬಹುದು, ಬನ್ನಿ ; ಬನ್ನಿ !

(ಇಬ್ಬರೂ ಬೇಗನೆ ಹೋಗುವರು. ಶಿವಯ್ಯ ಹೊರಗೆ ಬರುವನು.)

ಶಿವಯ್ಯ—ನಾನಿನ್ನು ತಳುವಿದರೆ ಕೆಲಸ ಕೆಡುವುದು!—ಇವರು ಹೋದರೇನಂತೆ! ಅಷ್ಟರಲ್ಲಿಯೆ ಬಸವಯ್ಯನ ಮಾತೂ ನಿಂತಿರುತ್ತದೆ. (ಬೇಗನೆ ಹೋಗುವನು.)

(ಹೊನ್ನಯ್ಯ ಲಿಂಗಣ್ಣರು ಬಸವಯ್ಯನನ್ನು ಹೊತ್ತು ತರುವರು.)

ಬಸವಯ್ಯ (ಮಲಗಿ ನರಳುತ್ತ)—
ನಾನುಳಿಯುವಂತಿಲ್ಲ, ಹೊನ್ನಯ್ಯ. ಲಿಂಗಣ್ಣ
ಮಂತ್ರಿಗಳೆ, ನನ್ನ ರಾಜ್ಯದ ಕ್ಷೇಮವೆಲ್ಲವೂ
ನಿಮ್ಮ ಮೇಲಿನ ಭಾರವಾಗಿದೆ.

ಹೊನ್ನಯ್ಯ (ಶೋಕದಿಂದ)— ಬಸವಯ್ಯ,
ನನ್ನೊಬ್ಬನನೆ ಬಿಟ್ಟು ನೀನು ಹೋಗುವೆಯೆಲ್ಲಿ?

ಬಸವಯ್ಯ—ಮರುಗದಿರು, ಪುತ್ರನೇ; ಈ ಕಷ್ಟಕಾಲದಲಿ
ಧೈರ್ಯಗೆಡಬೇಡ. ಮೋಸಗಾರರು ನೀವು
ಎಂದಿಬ್ಬರನು ಹಳಿದು, ನನ್ನನೀ ಗತಿಗೆಳೆದ
ಆ ಪಾಪಿ ಚಂಡಾಲನಿಗೆ ತಕ್ಕುದನೆ ಮಾಡು!
ನಿನಗಿದೇ ನಾನೀವ ಕಟ್ಟಕಡೆ ಸಂದೇಶ.

ಹೊನ್ನಯ್ಯ—ಅಯ್ಯೋ ಪಾಪಿ! ಶಿವಯ್ಯ!

ಬಸವಯ್ಯ—ಲಿಂಗಣ್ಣ ಮಂತ್ರಿಗಳೆ, ಸಂನ್ಯಾಸಿಯಿತ್ತುದಿದು;
ಈ ಪತ್ರವನು ತೆಗೆದುಕೊಂಡು ಹೈದರನೆಡೆಗೆ
ಹೋಗಿ, ನಿಂಬಯ್ಯ ಚೆಲುವಾಂಬೆಯರ ಪಾಳ್ಗೈಗೆ
ಬಿದನೂರು ಸಂಸ್ಥಾನವೆಂದಿಗೂ ದೊರೆಯುದಂತೆ
ಮಾಡುವಿರಾ! ನನ್ನ ತಂದೆಯ ಕೊಂದ ಪಾಪಿಗಳಿಗೆ
ತಗುವ ಪ್ರಾಯಶ್ಚಿತ್ತವನೆ ಮಾಡುವಿರಾ? ಹೇಳಿ!
ಮಾತುಕೊಡಿ! (ಕಾಗದವನ್ನು ನೀಡುವನು.)

ಲಿಂಗಣ್ಣ (ಅದನ್ನು ತೆಗೆದುಕೊಂಡು ಉಕ್ಕಿಬರುವ ದುಃಖದಿಂದ)—ಬಸವಯ್ಯ,
ನಾನು ಇನ್ನಾರ್ಗಂದು
ಈ ಕಾರ್ಯವನು ಮಾಡಿ ಕೃತಕೃತ್ಯನಾಗಲಿ?

ಬಸವಯ್ಯ— ನನಗಾಗಿ! ನನಗಾಗಿ ಸಾಹಸವ ಮಾಡಿ!
ನನ್ನ ತಂದೆಯ ನೆನೆದು ಸಾಹಸವ ಮಾಡಿ!
ನನ್ನೆದೆ ತಣಿಯಲೆಂದು ಸಾಹಸವ ಮಾಡಿ!—
ಹೊನ್ನಯ್ಯ ಲಿಂಗಣ್ಣ ಮಂತ್ರಿಗಳ ಬಿಡಬೇಡಿ.
ಮಾತುಕೊಟ್ಟರೆ ನೀವು, ನಿಶ್ಚಿಂತನಾಗಿ
ಮಡಿಯುವೆನು.

ಹೊನ್ನಯ್ಯ— ಬಸವಯ್ಯ, ಇದೊ ನನ್ನ ಪ್ರೊಕ್ಕೆಯಿದು:
ಬಾಳನೇ ಬಲಿದೆತ್ತು ನಿನ್ನ ಬಯಕೆಯ ಸಲಿಸಿ
ವಿಶ್ರಾಂತಿ ಹೊಂದುವೆನು!

**ಬಸವಯ್ಯ** (ನರಳುತ್ತ)— ಅಯ್ಯೋ ನೋವು !

(ಲಿಂಗಣ್ಣ ಉಪಚರಿಸಿ ಗಾಳಿ ಬೀಸುವನು.)

**ಹೊನ್ನಯ್ಯ**—ಅಯ್ಯೋ, ಆ ತಂಗಿ ರುದ್ರಾಂಬೆಗೇನೆಂದು
ಹೇಳಲಿ ! ಈ ಸುದ್ದಿಯನು ಕೇಳಿ ಅವಳೆಂತು
ಜೀವದಿಂದಿರುವಳು ? ಓ ತಂಗಿ ರುದ್ರಾಂಬೆ,

(ಲಿಂಗಣ್ಣ ಕಣ್ಣೊರಸಿಕೊಳ್ಳುತ್ತಾನೆ.)

ನಿನ್ನಿನಿಯನನು ಸೆರೆಯ ಮನೆಯಿಂದ ಬಿಡಿಸಿ
ಕಾಡಿನಲಿ ಕೊಲಲೆಂದೆ ನನ್ನನಟ್ಟಿದೆಯಾ ?

**ಬಸವಯ್ಯ** (ಕನವರಿಸಿ)—
ಯಾರದು ? ತಂದೆಯೇ ? ಬಾ, ತಂದೆ, ಬಾ.
ನಿನ್ನಾಜ್ಞೆಯನು ನಾನು ನಡೆಸಲಾರದೆ ಹೋದೆ.
ಮುನಿಯದಿರು. ಅದಕೆ ಇವರಿಬ್ಬರನು ನೇಮಿಸಿಹೆ.
ಅದಾರದು ? ತಾಯಿಯೇ ? ಬಾರಮ್ಮಾ, ಬಾ.

(ಮಗುವಿನಂತೆ ತೊದಲಾಡುತ್ತ ಕೈ ನೀಡುತ್ತ)

ನನ್ನನೆತ್ತಿಕೊಳ್ಳಮ್ಮಾ ! ನನಗೆ ಹಸಿವಾಗಿದೆ !—
ಅಮ್ಮಾ, ಆ ಕೆರೆಯ ಬಳಿಯಲಿ ಚಿಟ್ಟೆಗಳ ಹಿಡಿದು
ರುದ್ರಾಂಬೆಗಿತ್ತೆನಮ್ಮಾ. ಏನು ಚೆಲುವೆ ಆ ಹುಡುಗಿ !
—ನನ್ನ ಬಣ್ಣದ ಚಿಟ್ಟೆಯಿದು, ಶಿವಯ್ಯಾ !
ಮುಟ್ಟದಿರು !—ರುದ್ರಾಂಬೆ, ನೀನವನ ಬಳಿಗೇಕೆ
ಹೋಗುವುದು ? ಇತ್ತ ಬಾ. ನೋಡಿಲ್ಲಿ ! ನೋಡಿಲ್ಲಿ,
ರುದ್ರಾಂಬೆ, ಎಷ್ಟು ಚೆಲುವಾದ ಹೂವುಗಳು !

(ಹುಡುಗರಂತೆ ಕೇಕೆ ಹಾಕಿ ನಗುವನು.)

**ಲಿಂಗಣ್ಣ**— ಹೊನ್ನಯ್ಯ, ಉತ್ಕ್ರಮಣ ಚಿಹ್ನೆಯಿದು. ಕಾಲವೇ
ಹಿಂದಕ್ಕೆ ಸರಿಯುವುದು ಮರಣವೈತರುವಾಗ.
ಅವನೀಗ ಬಾಲ್ಯದುದ್ಯಾನದಲಿ ತಿರುಗುತಿಹನು !

**ಹೊನ್ನಯ್ಯ** (ಕರೆಯುವನು.)—ಬಸವಯ್ಯ ! ಬಸವಯ್ಯ !

**ಬಸವಯ್ಯ** (ಮೊದಲಿನಂತೆ)—ಬಂದೇ ! ಬಂದೇ ! ಹೊನ್ನಯ್ಯ, ನಿಲ್ಲು !
ನೋಡಿಲ್ಲಿ, ಹಸುರು ಬಯಲಿನ ಮೇಲೆ ಬಿಸಿಲೆನಿತು
ಮುದ್ದಾಗಿ ಮಲಗಿಹುದು !—ಅಯ್ಯೋ, ರುದ್ರಾಂಬೆ
ಬಿದ್ದುಬಿಟ್ಟಳು ಅಲ್ಲಿ ! ಬೇಗೆತ್ತು, ಹೊನ್ನಯ್ಯ !

ಲಿಂಗಣ್ಣ (ಗಾಳಿ ಬೀಸುತ್ತ)—ಬಸವಯ್ಯ! ಬಸವಯ್ಯ!

ಬಸವಯ್ಯ—ರುದ್ರಾಂಬೆ, ನೀನೆನ್ನನೇ ಮದುವೆಯಾಗುವೆಯಾ?

ಕೇಳಲ್ಲಿ, ಕೂಗುತಿದೆ ಕೋಗಿಲೆ 'ಕುಹೂ' ಎಂದು!

ಹೊನ್ನಯ್ಯ (ಗದ್ಗದ ಕಂಠದಿಂದ)—

ಬಸವಯ್ಯ, ಬಸವಯ್ಯ, ರುದ್ರಾಂಬೆಗಾಗಿ-

ಯಾದರೂ ಬದುಕಲಾರೆಯಾ?

ಬಸವಯ್ಯ (ರೇಗಿದಂತೆ)— ಓ ರುದ್ರಾಂಬೆ,

ಮುಡಿಗೆದರಿ ನಿಂತಿರುವೆ ಏಕಿಂತು? ಏನಿದು?

ಹುಚ್ಚಿಯಂತಿಹೆಯಲ್ಲಾ! ರಕ್ತಾಕ್ಷಿಯಾಗಿರುವೆ?

ಹಾಗಾದರಿನ್ನು ನೀ ರುದ್ರಾಂಬೆಯಲ್ಲವೇ?

ಮಾತಾಡು! ಮಾತಾಡು, ಓ ರಕ್ತಾಕ್ಷಿ!—

ಓ ರಕ್ತಾಕ್ಷಿ, ಮುಯ್ಯಿ ತೀರಿಸಿಕೋ!—(ಚೀರಿ)

ಅವನಲ್ಲ! ಅವನಲ್ಲ! ಅವನು ಹೊನ್ನಯ್ಯ!

ಅಯ್ಯೋ ಅವನನೇತಕೆ ತಿವಿದು ಕೊಂದೆ? (ಅಳುತ್ತಾನೆ.)

ಹೊನ್ನಯ್ಯ—ಏನಿದು ಮಂತ್ರಿಗಳೆ?

ಲಿಂಗಣ್ಣ (ಸುಯ್ದು)—ಏನಿಲ್ಲ! ಎಲ್ಲ ಶಾಂತವಾಗುತ್ತದೆ!

ಬಸವಯ್ಯ— ಆಹಾ!—ಏನಿದು ಶಾಂತಿ!—ಯಾರಿವರು!—

ನಿಲ್ಲಿ! ನಿಲ್ಲಿ! ನಾನೂ ಬರುತ್ತೇನೆ!—

ಕವಿವರ್ಯರಿಹರಿಲ್ಲಿ! ಇನಿತು ದಿನ ನಿಮ್ಮನೇ

ನಾನರಸುತಿದ್ದೆ! ಜ್ಯೋತಿ! ಜ್ಯೋ-ತಿ! ಜ್ಯೋ—!

(ಸಾಯುತ್ತಾನೆ)

ಲಿಂಗಣ್ಣ—ಎಲ್ಲ ಮುಗಿದುದು, ಹೊನ್ನಯ್ಯ. ಮುಂದೇನು ಗತಿ?

ಹೊನ್ನಯ್ಯ (ದೂರ ನೋಡಿ)—ಎರಡು ಕುದುರೆಗಳಿರಲಿಲ್ಲವೇ ಅಲ್ಲಿ, ನಾವಾಗ ನೋಡಿದಾಗ? ಈಗ ಒಂದೇ ಕಾಣುತ್ತಿದೆ!

ಲಿಂಗಣ್ಣ—ಹೌದು; ಆ ಪಾಪಿ ಇಲ್ಲಿಯೇ ಅಡಗಿದ್ದನೆಂದು ತೋರುತ್ತದೆ ನಾವು ಬಂದಾಗ. ನಾವು ಕೆಳಗಿಳಿದ ವೇಳೆ ಅವನು ಕುದುರೆಯನ್ನೇರಿ ಹೋಗಿರಬೇಕು.

ಹೊನ್ನಯ್ಯ (ಬೆಚ್ಚಿ ಆಲಿಸಿ)—ಅದೇನು? ಖುರಪುಟ ಧ್ವನಿ!

ಲಿಂಗಣ್ಣ (ಆಲಿಸಿ)—ಬಿದನೂರ ಕಡೆಯಿಂದ!

ಹೊನ್ನಯ್ಯ (ಉದ್ವೇಗದಿಂದ)—ಹೌದು!

ಲಿಂಗಣ್ಣ—ನಮ್ಮನ್ನಾಕ್ರಮಿಸಲು ಬರುವರೆಂದು ತೋರುತ್ತದೆ. ಈಗೇನು ಮಾಡುವುದು? ಕಳೇಬರವನ್ನು ಇಲ್ಲಿಯೇ ಬಿಟ್ಟರೆ ಸಂಸ್ಕಾರ ನಡೆಯದು!

**ಹೊನ್ನಯ್ಯ**—ಚಿಂತೆ ಬೇಡ, ನಾನೊಂದುಪಾಯ ಹೂಡುತ್ತೇನೆ. ನೀವು ಶಿವಮೊಗ್ಗೆಗೆ ಬೇಗ ಹೋಗಿ ಮುಂದಿನ ರಾಜಕಾರ್ಯವನ್ನಾಲೋಚಿಸಿ. ತಡ ಮಾಡಿದರೆ ಶಿವಯ್ಯನಿಂದ ಏನಾಗುವುದೋ ನಾನರಿಯೆ! ಅವನು ನಿಂಬಯ್ಯನ ಗೂಢಚರನಿದ್ದರೂ ಇರಬಹುದು! ಬೇಗ! ಕುದುರೆಯನ್ನೇರಿ!

**ಲಿಂಗಣ್ಣ**—ನಿನ್ನನ್ನು ಕೊಲ್ಲದೆ ಬಿಡುವರೇ?

**ಹೊನ್ನಯ್ಯ**—ನಾನೇ ಬಸವಯ್ಯನನ್ನು ಹಿಡಿದು ಕೊಂದೆನೆಂದು ಹೇಳಿ ಹೇಗಾದರೂ ಮಾಡಿ ಆತನ ದೇಹವನ್ನು ಬಿದನೂರಿಗೆ ಸಾಗಿಸಿ ಅದಕ್ಕೆ ಸಂಸ್ಕಾರ ನಡೆಸುತ್ತೇನೆ. ಅವರು ಹತ್ತಿರ ಬಂದರು! ನೀವೂ ಇಲ್ಲಿದ್ದರೆ ಉಪಾಯ ಸಾಗುವುದಿಲ್ಲ. ಕೆಲಸ ಕೆಡುವುದು.—ನಡೆಯಿರಿ! ಬೇಗ ನಡೆಯಿರಿ!

**ಲಿಂಗಣ್ಣ**—ಹೊನ್ನಯ್ಯ, ಎಚ್ಚರಿಕೆ! (ಹೋಗುವನು.)

**ಹೊನ್ನಯ್ಯ** (ದೂರ ನೋಡುತ್ತ)—ಬಿದನೂರಿನಿಂದ ಐತರುವ ರಾಜಭಟರಿರಬೇಕು! ಬರಲಿ! ನಾನೆಯೆ ಬಸವಯ್ಯ ಲಿಂಗಣ್ಣ ಶಿವಯ್ಯರನ್ನು ಬೆನ್ನಟ್ಟಿ ಬಂದೆನೆಂದೂ, ಅವರನಾಕ್ರಮಿಸಲು ಸಾಧ್ಯವಿಲ್ಲದೆ ಬಸವಯ್ಯನನ್ನು ತಿವಿಯಬೇಕಾಯಿತೆಂದೂ, ಲಿಂಗಣ್ಣ ಶಿವಯ್ಯರು ಖುರಪುಟ ಧ್ವನಿಗಳನ್ನು ಕೇಳಿ ಪ್ರಾಣಭಯದಿಂದ ಮುಂದೆ ದೌಡಾಯಿಸಿದರೆಂದೂ ಹೇಳುವೆನು. ನಂಬಿದರೆ ಒಳಿತಾಯ್ತು: ಹೇಗಾದರೂ ಮಾಡಿ ಕಳೆಯನಿಗೆ ಚರಮ ಸಂಸ್ಕಾರಗಳನಾದರೂ ನಡೆಸುವೆನು.—ನ ಂ ಬ ದಿ ರೆ,—ನಂಬದಿರೆ ಈಶ್ವರೇಚ್ಛೆ!—ವೀರನಂದದಿ ಅರಿಗಳನಿರಿದು (ಕೆಳಗೆ ನೋಡಿ) ಓ ಮಿತ್ರಾ, ನಿನ್ನೆಡೆಯೆ ಶವವಾಗಿ ಬೀಳುವೆನು. (ತನ್ನ ಕತ್ತಿಯನ್ನು ಹೊರಗೆಳೆದು) ಬಸವಯ್ಯ, ಶಿವಯ್ಯನಿಗೆ ಮುಂದೆ ಮಾಡುವ ಈ ಕೆಲಸವನ್ನು ನಿನಗಿಂದು ಮಾಡುತ್ತೇನೆ! (ಬಸವಯ್ಯನೆದೆಗೆ ತಿವಿಯುತ್ತಾನೆ. ಕೆಂಪಾದ ಖಡ್ಗವನ್ನು ನೋಡುತ್ತ) ಸಾಕು, ಇದರಿಂದ ಅವರು ಮೋಸಹೋಗುತ್ತಾರೆ. (ನಿರೀಕ್ಷಿಸುತ್ತ ನಿಲ್ಲುತ್ತಾನೆ. ಕಣ್ಣೀರನ್ನೆಲ್ಲ ಬೇಗಬೇಗನೆ ಒರಸಿಕೊಳ್ಳುತ್ತಾನೆ.)

[ಪರದೆ ಬೀಳುವುದು.]

## ದೃಶ್ಯ ೩

(ಶಿವಮೊಗ್ಗೆಯಲ್ಲಿ ತುಂಗೆಯ ತೀರದಲ್ಲಿ ಹೈದರನ ಸೇನೆಯ ಶಿಬಿರ. ಪಹರಿಗಳಿಬ್ಬರೂ ಮಾತಾಡುತ್ತಿರುವರು. ಅವರಲ್ಲಿ ಒಬ್ಬನು ಮುಸಲ್ಮಾನ. ಅವನು ಹೊಗೆಬತ್ತಿ ಸೇದುತ್ತಿರುವನು.)

**ಒಂದನೆ**—ಸಾಹೇಬರೆ, ಈ ನಾಡು ಎಷ್ಟು ಚೆಲುವಾಗಿದೆ. ನೋಡಿ, ಮಾಲೆಮಾಲೆಗಳಾಗಿ ಹಬ್ಬಿರುವ ಆ ಹಸುರು ಮಲೆಗಳ ಹಿಂದೆ ಸೂರ್ಯಬಿಂಬವು ಹೇಗೆ

ತಳತಳಿಸಿ ಮುಳುಗುತ್ತಿದೆ! ಅದರ ಪ್ರತಿಬಿಂಬದ ಹೊಂಬೆಳಕಿನಿಂದ ಹೊಳೆಯ ನೀರಿಗೇ ಬೆಂಕಿ ಬಿದ್ದಂತಿದೆ!

ಎರಡನೆ (ಹೊಗೆಬತ್ತಿ ಸೇದಿ)—ಹೌದು, ರಾಯರೇ, ನಾಡೇನೋ ಚೆಲುವಾದುದೆ! ಆದರೆ ಈ ಬೆಟ್ಟಗುಡ್ಡಗಳಲ್ಲಿ ಪಾಳೆಯಗಾರರನ್ನು ಗೆಲ್ಲುವುದೂ ಬಹು ಕಷ್ಟ. ನೋಡಿ, ಮೊನ್ನೆ ಆ ಚಿಕ್ಕ ಪಾಳೆಯಗಾರನನ್ನು ಹಿಡಿಯುವುದು ಕೂಡ ಸಮ್ಮಿಂದಾಗದೇ ಹೋಯಿತು. ನಾಳೆ ಬಿದನೂರನ್ನು ಹಿಡಿಯುವುದು ಎಷ್ಟು ಪ್ರಯಾಸವೋ ಏನೋ? (ಹೊಗೆಬತ್ತಿ ಸೇದುವನು.)

ಒಂದನೆ—ಬಿದನೂರನ್ನು ಸುಲಭವಾಗಿ ಹಿಡಿಯಬಹುದು.

ಎರಡನೆ—ಅದೂ ಮಲೆನಾಡಲ್ಲವೇ?

ಒಂದನೆ—ಆದರೇನು? ಅಲ್ಲಿ ಎರಡು ಪಂಗಡಗಳಾಗಿವೆ. ಮಂತ್ರಿಗಳು ರಾಜಕುಮಾರರು ಎಲ್ಲರೂ ನಮಗೆ ಸಹಾಯಮಾಡುವರು. ಜನಗಳಿಗೂ ರಾಣಿಯನ್ನು ಕಂಡರಾಗುವುದಿಲ್ಲವಂತೆ. ಅಲ್ಲಿ ನಮ್ಮ ಕಡೆಯ ಗೂಢಚರರಾಗಿರುವ ರಾಮರಾಯರಿಲ್ಲವೇ? ರಂಗದಾಸರನ್ನು ಕಳುಹಿಸಿದವರೂ ಅವರೇ. ಆ ಕಾಗದವನ್ನು ನೋಡಿಕೊಂಡೇ ನಮ್ಮ ದೊರೆಗಳು ತಮ್ಮ ಜೈತ್ರಯಾತ್ರೆಯ ಮುಖವನ್ನು ಇತ್ತಕಡೆಗೆ ತಿರುಗಿಸಿದ್ದು.

ಎರಡನೆ—ಇಲ್ಲಿ ಬೀಡು ಬಿಟ್ಟಾಗಲೇ ಎರಡು ದಿನಗಳಾದುವು. ಇನ್ನು ಎಷ್ಟು ದಿನ ಹೀಗೆಯೇ ಕುಳಿತಿರುವುದು?

ಒಂದನೆ—ಆ ಚಿಂತೆ ಬೇಡ. ನಾಳೆಯೇ ಹೊರಡಬಹುದು. ಇವತ್ತು ಬಿದನೂರಿನ ರಾಜಪುತ್ರರೇ ಬಂದಿದ್ದಾರಂತೆ ಇಲ್ಲಿಗೆ.

ಎರಡನೆ—ಯಾವಾಗ ಬಂದರು?

ಒಂದನೆ—ಆಗಲೇ ಬಂದರಂತೆ. ನಮ್ಮ ದೊರೆಗಳೊಡನೆ ಶಿಬಿರದಲ್ಲಿ ಮಾತಾಡುತ್ತಿದ್ದಾರೆ. ನಮ್ಮ ಸೇನಾಪತಿಗಳೂ ಅಲ್ಲಿಯೇ ಇದ್ದಾರೆ.

ಎರಡನೆ—ರಾಯರೇ, ಹಾಗಾದರೆ ನಮಗೆ ಬಿದನೂರಿನಲ್ಲಿ ಬೇಕಾದಷ್ಟು ಬೇಟೆ ಸಿಕ್ಕಬಹುದು! ಅಲ್ಲವೇ?

ಒಂದನೆ—ಅದಕ್ಕೆ ಅವಕಾಶವಿಲ್ಲ.

ಎರಡನೆ—ಹಾಗೆಂದರೇನು? ನಾವು ಗೆಲ್ಲಲಾರೆವೇ?

ಒಂದನೆ—ಗೆಲ್ಲುತ್ತೇವೆ! ಆದರೆ ರಾಜಕುಮಾರರಿಗಾಗಿ ನಾವು ರಾಜ್ಯ ಗೆಲ್ಲುವುದರಿಂದ ಲೂಟಿಗೀಟಿಗವಕಾಶವಿಲ್ಲ.

ಎರಡನೆ—ಹಾಗಾದರೆ ಪ್ರಯೋಜನ?

ಒಂದನೆ—ಒಳ್ಳೆಯ ಹೆಸರು ಬರುತ್ತದೆ.

ಎರಡನೆ—ಇದೊಳ್ಳೆಯ ಮಾತು! ಹೆಸರಿಂದೇನು ಹೊಟ್ಟೆ ತುಂಬುತ್ತದೆಯೇ?

ಒಂದನೆ—ಹೈದರಾಲಿಯವರಿಗೆ ಕಪ್ಪ ಸಿಕ್ಕುವುದಿಲ್ಲವೇ ?

ಎರಡನೆ—ನಮಗೆ ?

ಒಂದನೆ—ನಮಗೂ ಬಹುಮಾನಗಳು ದೊರಕಬಹುದು.

ಎರಡನೆ (ಬೆಚ್ಚಿ)—ಅದೇನು ಸದ್ದು ?

ಒಂದನೆ (ಆಲಿಸಿ)—ಗೊರಸಿನ ಸದ್ದು ! ಇತ್ತ ಕಡೆಗೇ ಬರುತ್ತಿದೆ !

ಎರಡನೆ (ಹೊಗೆಬತ್ತಿ ಬಿಸುಟು)—ಸಿದ್ಧರಾಗಿ ನಿಲ್ಲಿ !

(ಇಬ್ಬರೂ ಕತ್ತಿಗಳನ್ನು ಹಿರಿದು ಸಿದ್ಧರಾಗಿ ನಿಲ್ಲುತ್ತಾರೆ.)

ಒಂದನೆ (ನೋಡಿ)—ಒಬ್ಬನೆ ಸವಾರ ! ಎಷ್ಟು ಜೋರಾಗಿ ಬರುತ್ತಿದ್ದಾನೆ !

ಎರಡನೆ (ಹಣೆಯ ಮೇಲೆ ಕೈಯಿಟ್ಟು ನೋಡಿ)—ಮುದುಕನಲ್ಲವೇ ?

ಒಂದನೆ—ಹೌದು, ಯಾರೋ ಬಿದನೂರು ಸಂಸ್ಥಾನದ ದೊಡ್ಡ ಅಧಿಕಾರಿಯಿರಬೇಕು.

(ಇಬ್ಬರೂ ಕತ್ತಿಗಳನ್ನು ಎತ್ತಿ ಹಿಡಿದು)

ಒಂದನೆ }
ಎರಡನೆ } —ನಿಲ್ ! ನಿಲ್ !

(ಲಿಂಗಣ್ಣನ ಪ್ರವೇಶ)

ಲಿಂಗಣ್ಣ—ಹೈದರಾಲಿಯವರಿಗೆ ಜಯವಾಗಲಿ !

(ಪಹರಿಗಳು ಕತ್ತಿ ಇಳಿಸಿ)

ಒಂದನೆ—ಯಾರು ನೀವು ?

ಎರಡನೆ—ಒಳಗೆ ಹೋಗಲು ಅಪ್ಪಣೆಯಿಲ್ಲ.

ಲಿಂಗಣ್ಣ—ನಾವು ಬಿದನೂರು ಸಂಸ್ಥಾನದ ಮಂತ್ರಿಗಳು. ಹೈದರಾಲಿಯವರಿಗೆ ಕೊಡುವ ಪತ್ರವೊಂದಿದೆ. ತಡಮಾಡಿದರೆ ಪ್ರಮಾದವಾಗಬಹುದು. ನಾನು ಮಹಾರಾಜರನ್ನೀಗಲೆ ನೋಡಬೇಕು !

ಒಂದನೆ—ಸ್ವಾಮಿ, ನಿಮ್ಮ ರಾಜಕುಮಾರರು ನಮ್ಮ ದೊರೆಗಳೊಡನೆ ಏಕಾಂತದಲ್ಲಿದ್ದಾರೆ. ಈಗ ನೋಡಲು ಅವಕಾಶವಿಲ್ಲ.

ಲಿಂಗಣ್ಣ—ಏನು ? ನಮ್ಮ ರಾಜಕುಮಾರರೇ ?

ಒಂದನೆ—ಹೌದು, ನಿಮ್ಮ ರಾಜಕುಮಾರ ಬಸವಯ್ಯನವರು !

ಲಿಂಗಣ್ಣ—ಇದೇನೊ ವಿಚಿತ್ರವಾಗಿದೆ ! ದಯಮಾಡಿ ಒಳಗೆ ಬಿಡಿ ; ಹಿರಿಯ ಕಾರ್ಯವೊಂದಿದೆ.

ಎರಡನೆ—ಯಾರನ್ನೂ ಒಳಗೆ ಬಿಡಬಾರದೆಂದು ಅಪ್ಪಣೆಯಾಗಿದೆ.

ಲಿಂಗಣ್ಣ—ಹಾಗಾದರೆ ಈ ಪತ್ರವನ್ನಾದರೂ ಅವರಿಗೆ ಕೊಟ್ಟು ಏನು ಹೇಳು ವರೊ ನೋಡಿ ನಿಮ್ಮಿಂದ ಮಹದುಪಕಾರವಾಗುತ್ತದೆ. ನಿಮಗೆ ಬಹು ಮಾನ ದೊರೆಯುತ್ತದೆ !

ಒಂದನೆ
ಎರಡನೆ }—ಇತ್ತ ಕೊಡಿ ! ಇತ್ತ ಕೊಡಿ !

(ಇಬ್ಬರೂ ಕೈ ನೀಡುವರು. ಮುಸಲಾನ್ ಪಹರಿ ಕಾಗದವನ್ನು ತೆಗೆದು ಕೊಂಡು ಹೋಗುತ್ತಾನೆ.)

ಲಿಂಗಣ್ಣ—ನಮ್ಮ ರಾಜಕುಮಾರ ಬಸವಯ್ಯನವರು ಬಂದಿದ್ದಾರೆಯೇ ?

ಒಂದನೆ—ಹೌದು ಸ್ವಾಮಿ, ದೊರೆಗಳೊಡನೆ ಮಾತಾಡುತ್ತಿದ್ದಾರೆ.

ಲಿಂಗಣ್ಣ (ಸ್ವಗತ)—ಅಯ್ಯೋ ಪಾಪಿ ಶಿವಯ್ಯ ! ಇದಕ್ಕಾಗಿಯೇ ಘೋರ ಕೃತ್ಯ ವನೆಸಗಿದೆಯಾ ? ಇರಲಿ ! ಲಿಂಗಣ್ಣನಿಂದ ಪಾರಾಗಬಲ್ಲೆಯಾ ?

ಒಂದನೆ—ಉತ್ತರ ಬರುವ ತನಕ ವಿಶ್ರಮಿಸಿಕೊಳ್ಳಿ, ಸ್ವಾಮಿ. ಬಹಳ ದಣಿದಿರು ವಂತಿದೆ.

(ಲಿಂಗಣ್ಣನು ಚಿಂತಾಮಗ್ನನಾಗಿ ಬೆನ್ನಿನ ಮೇಲೆ ಕೈಕಟ್ಟಿಕೊಂಡು ನಿಡುಸುಯ್ಯುತ್ತ ತಿರು ಗಾಡುವನು. ಪಹರಿಯು ವಿಸ್ಮಯದಿಂದಲೂ ಗೌರವದಿಂದಲೂ ಅವನನ್ನು ನೋಡುತ್ತಿರುವನು.)

[ಪರದೆ ಬೀಳುವುದು.]

## ದೃಶ್ಯ ೫

(ತುಂಗಾ ತೀರದಲ್ಲಿ ಹೈದರಾಲಿಯ ಸ್ವಂತ ಬೀಡು. ಶಿವಯ್ಯನು ಕುಳಿತಿದ್ದಾನೆ. ಹೈದ ರಾಲಿಯೂ ಆತನ ಸೇನಾಪತಿ ಮಹಮ್ಮದಾಲಿಯೂ ಕುಳಿತು ಶಿವಯ್ಯನೊಡನೆ ಮಾತಾಡುತ್ತಿ ದ್ದಾರೆ ಕರಣಿಕನೊಬ್ಬನು ಹೈದರನ ಪಕ್ಕದಲ್ಲಿ ಕಾಗದ ಪತ್ರಗಳನ್ನು ಕೈಲಿ ಹಿಡಿದು ನಮ್ರತೆ ಯಿಂದ ನಿಂತಿದ್ದಾನೆ )

ಹೈದರಾಲಿ—ಇರಲಿ ; ಆ ವಿಷಯಗಳೆಲ್ಲ ಈ ಹಿಂದೆಯೇ ನಮಗೆ ತಿಳಿದುಬಂದಿದೆ. ಮುಂದಾದುದೇನು ?

ಶಿವಯ್ಯ—ಸೇನಾಪತಿ ನಿಂಬಯ್ಯನೂ ರಾಣಿ ಚೆಲುವಾಂಬೆಯೂ ಸೇರಿ ಮಂತ್ರಿ ಯಾದ ಲಿಂಗಣ್ಣನೊಡನೆ ಒಳಸಂಚು ನಡೆಸಿ ನನ್ನನ್ನು ಸೆರೆಮನೆಗೊಯ್ದರು. ಶಿವಯ್ಯನೆಂಬ ನನ್ನ ಗೆಳೆಯನೊಬ್ಬನು ಬಹಳ ಸಾಹಸಮಾಡಿ ಉಪಾಯದಿಂದ ರಾತ್ರಿ ಕಾರಾಗೃಹಕ್ಕೆ ನುಗ್ಗಿ ನನ್ನನ್ನು ಬಿಡಿಸಿದನು. ತಮ್ಮ ಗೂಢಚರರೆಂದು ತಾವು ಹೇಳಿದ ಆ ಸಂನ್ಯಾಸಿಯ ಬುದ್ಧಿವಾದದಂತೆ ನಾನೂ ಶಿವಯ್ಯನೂ ತಮ್ಮಲ್ಲಿಗೆ ಬರುತ್ತಿರಲು ದಾರಿಯಲ್ಲಿ ಲಿಂಗಣ್ಣ ಮಂತ್ರಿ, ಪರಿವಾರದೊಡನೆ ಬಂದು ನಮ್ಮನ್ನು ಅಡ್ಡಗಟ್ಟಿ ಆಕ್ರಮಿಸಿದನು. ನಡೆದ ಹೋರಾಟದಲ್ಲಿ ನನ್ನ

ಮಿತ್ರ ಶಿವಯ್ಯನು ಗಾಯಗೊಂಡು ಕೆಳಗುರುಳಿದನು. ನಾನು ಅದೃಷ್ಟವಶದಿಂದ ತಪ್ಪಿಸಿಕೊಂಡು ತಮ್ಮನ್ನಾಶ್ರಯಿಸಲು ಬಂದೆ. ನನ್ನನ್ನು ಕಾಪಾಡಬೇಕು. ನನ್ನ ತಂದೆಯ ರಾಜ್ಯ ಅನ್ಯಾಕ್ರಾಂತವಾಗದಂತೆ ಕೃಪೆಮಾಡಬೇಕು.

(ಕೈಮುಗಿಯುವನು.)

ಮಹಮ್ಮದಾಲಿ—ಬಸವಯ್ಯನವರೆ, ನಿಮ್ಮ ಪಕ್ಷವಾಗಿ ಯಾರಿದ್ದಾರೆ ಬಿದನೂರಿನಲ್ಲಿ ?

ಶಿವಯ್ಯ—ಪ್ರಜೆಗಳೆಲ್ಲರೂ ನನ್ನ ಪಕ್ಷವಾಗಿಯೆ ಇದ್ದಾರೆ. ಆದರೆ ರಾಣಿ ನಿಂಬಯ್ಯ ಲಿಂಗಣ್ಣ ಇವರ ಭಯದಿಂದ ಅಂಜಿದ್ದಾರೆ. ತಮ್ಮ ಸಹಾಯ ದೊರೆತರೆ ಎಲ್ಲವೂ ನೇರವಾಗುವುದು.

ಹೈದರಾಲಿ—ನಾವು ಸಹಾಯಮಾಡಿದರೆ ನಮ್ಮ ಅಧೀನದಲ್ಲಿರಲು ಒಪ್ಪುವಿರೋ ?

ಶಿವಯ್ಯ—ಹೆಮ್ಮೆಯಿಂದ.

ಹೈದರಾಲಿ—ಈ ದಾಳಿಯ ವೆಚ್ಚವನ್ನೆಲ್ಲ ನೀವೇ ವಹಿಸಬೇಕು.

ಶಿವಯ್ಯ—ಸಂತೋಷದಿಂದ.

ಹೈದರಾಲಿ—ಪ್ರತಿವರ್ಷವೂ ಕಪ್ಪ ಸಲ್ಲಿಸಬೇಕು.

ಶಿವಯ್ಯ—ಅಪ್ಪಣೆ.

ಹೈದರಾಲಿ—ಮಹಮ್ಮದಾಲಿಯವರೆ, ಬಸವಯ್ಯನವರಿಂದ ಈ ರಾತ್ರಿಯೆ ಕರಾರು ಬರೆಯಿಸಿ.

ಮಹಮ್ಮದಾಲಿ—ಆಜ್ಞೆ ! (ಶಿವಯ್ಯಗೆ) ರಾಜಕುಮಾರರೆ, ನಿಮ್ಮಿಂದ ನಡೆಯಬಹುದಾದ ಸಹಾಯಗಳನ್ನೆಲ್ಲ ಮಾಡುವಿರಷ್ಟೆ ?

ಶಿವಯ್ಯ—ಉತ್ಸಾಹದಿಂದ.

ಹೈದರಾಲಿ—ನಿಮ್ಮ ಕೋಟೆ ಬಹಳ ದುರ್ಗಮವಾದುದೇ ?

ಶಿವಯ್ಯ—ಹೌದು, ಸಾರ್ವಭೌಮರೆ; ಆದರೆ ಗುಪ್ತದ್ವಾರಗಳಿವೆ. ಅವುಗಳೆಲ್ಲ ನನಗೆ ಗೊತ್ತು.

ಮಹಮ್ಮದಾಲಿ—ನಿಮ್ಮ ಸೈನ್ಯದ ಸಂಖ್ಯೆ ?

ಶಿವಯ್ಯ—ಎಂಟು ಸಾವಿರ. ಆದರೆ ಅವರಲ್ಲಿ ಅನೇಕರು ನನ್ನ ಕಡೆಗಿದ್ದಾರೆ. ನಾವು ಕೋಟೆಯನ್ನು ಮುತ್ತಿದರೆ ನಮಗೇ ಸಹಾಯವಾಗುವರು.

ಹೈದರಾಲಿ (ಮಹಮ್ಮದಾಲಿಗೆ)—ಇಲ್ಲಿಂದ ನಾವೆಂದು ಹೊರಡಬಹುದು ?

ಮಹಮ್ಮದಾಲಿ—ನಾಳೆಯೆ ಹೊರಡಬೇಕು, ಮಹಾಸ್ವಾಮಿ.

ಶಿವಯ್ಯ—ಹೌದು, ತಡಮಾಡಿದರೆ ಶತ್ರು ಬಲಗೊಳ್ಳುತ್ತಾನೆ.

(ಪಹರಿ ಕಾಗದದೊಡನೆ ಬಂದು ಸಲಾಂ ಮಾಡುವನು.)

ಮಹಮ್ಮದಾಲಿ—ಏನು ಸಮಾಚಾರ, ಸಯ್ಯದ್ ?

ಪಹರಿ—ಮಹಾಸ್ವಾಮಿ, ರಾಹುತನೊಬ್ಬನು ಬಿದನೂರಿಂದ ಬಂದಿದ್ದಾನೆ. ದೊರೆಗಳನ್ನು ನೋಡಬೇಕೆಂದು ಹೇಳಿದನು. ಏಕಾಂತದಲ್ಲಿದ್ದಾರೆ ಎನಲು ಈ ಕಾಗದವನ್ನು ತಮಗೆ ನಿವೇದಿಸುವಂತೆ ಹೇಳಿ ಕೊಟ್ಟನು.

(ಪತ್ರವನ್ನು ಕೊಡುತ್ತಾನೆ. ಮಹಮ್ಮದಾಲಿ ಅದನ್ನು ತೆಗೆದುಕೊಂಡು ಹೈದರಾಲಿಗೆ ಕೊಡುತ್ತಾನೆ. ಕರಣಿಕನು ಅದನ್ನು ಹೈದರನ ಕಿವಿಯಲ್ಲಿ ಓದುತ್ತಿರಲು, ಮೊದಲಿಂದಲೂ ಬೆಚ್ಚಿ ಎಲ್ಲವನ್ನೂ ಉದ್ವಿಗ್ನನಾಗಿ ನೋಡುತ್ತಿದ್ದ ಶಿವಯ್ಯ ಮಾತಾಡುತ್ತಾನೆ.)

ಶಿವಯ್ಯ—ಸಾರ್ವಭೌಮರೆ, ಮತ್ತೆ ಇದೇನೋ ಪಿತೂರಿ ಇರಬೇಕು !

ಮಹಮ್ಮದಾಲಿ—ಇರಲಿ, ರಾಜಕುಮಾರರೆ, ನೀವು ಭಯಪಡಬೇಡಿ. ಇಂತಹ ನೂರಾರು ತಳತಂತ್ರಗಳನ್ನು ಬಲ್ಲವರು ನಮ್ಮ ದೊರೆಗಳು.

ಹೈದರಾಲಿ (ಪತ್ರವನ್ನು ಕರಣಿಕನಿಂದ ತೆಗೆದುಕೊಂಡು ಮಹಮ್ಮದಾಲಿಗೆ)—ಇದೇನೊ ವಿಚಿತ್ರವಾಗಿದೆ !

ಮಹಮ್ಮದಾಲಿ—ಪತ್ರ ಯಾರಿಂದ ಬಂದುದು ?

ಹೈದರಾಲಿ—ನಮ್ಮ ರಾಮರಾಯರಿಂದ. ನೀವೂ ನೋಡಿಕೊಳ್ಳಿ. (ಕೊಡುತ್ತಾನೆ. ಮಹಮ್ಮದಾಲಿ ಓದುತ್ತಿರೆ) ಬಸವಯ್ಯನವರೆ, ಆ ಸಂನ್ಯಾಸಿ ನಿಮ್ಮ ಕೈಗೇನಾದರೂ ಪತ್ರ ಬರೆದು ಕೊಟ್ಟಿದ್ದರೇ ?

ಶಿವಯ್ಯ (ಬೆದರಿದಂತೆ)—ಹೌದು, ಪ್ರಭೂ. ಅದು ನನ್ನ ಸ್ನೇಹಿತ ಶಿವಯ್ಯನ ಕೈಲಿತ್ತು. ಆತನನ್ನು ಲಿಂಗಣ್ಣ ಮಂತ್ರಿ ಹಿಡಿದಾಗ ನಾನು ತ್ವರೆಯಿಂದ ತಲೆ ತಪ್ಪಿಸಿಕೊಂಡು ಬಂದೆ. ಪತ್ರ ಶತ್ರುಗಳ ಕೈಗೆ ಬಿದ್ದಿರಬೇಕು.

ಮಹಮ್ಮದಾಲಿ—ಪ್ರಭೂ, ಬಸವಯ್ಯನವರು ಚೆನ್ನಾಗಿ ಊಹಿಸಿದ್ದಾರೆ. ಶತ್ರು ಈ ಪತ್ರದ ಸಹಾಯದಿಂದ ಪಿತೂರಿ ನಡೆಸಲು ಹೊರಟಿದ್ದಾನೆ. ಇದನ್ನು ತಂದವನಿಗೆ ಮರಣ ದಂಡನೆಯನ್ನೇ ವಿಧಿಸಬೇಕು.

ಹೈದರಾಲಿ—ಇರಲಿ ; ವಿಚಾರಿಸಿ ನೋಡೋಣ. ಆ ರಾಹುತನನ್ನು ಬರಹೇಳಿ.

ಮಹಮ್ಮದಾಲಿ (ಪಹರಿಗೆ)—ಹೋಗು ; ಆ ಸವಾರನನ್ನು ಕರೆದುಕೊಂಡು ಬಾ.

(ಪಹರಿ ಹೋಗುತ್ತಾನೆ)

ಶಿವಯ್ಯ—ಚಕ್ರವರ್ತಿಗಳೆ, ಏನು ಭಯಂಕರವಾದ ಪಿತೂರಿ ಹೂಡುವರೋ ನಾನರಿಯೆ. ರಾಜತಂತ್ರವಿಶಾರದರು ತಾವು. ನನ್ನನ್ನು ಪೊರೆಯಬೇಕು. ಬೇಟೆನಾಯಿಗಳಟ್ಟಿದ ಮೊಲದ ಮರಿಯಂತೆ ತಮ್ಮಲ್ಲಿಗೆ ಬಂದಿದ್ದೇನೆ. ತಾವು ಕಾಪಾಡಬೇಕು, ನನ್ನ ಭಾಗದ ದೇವರಾಗಿ.

ಹೈದರಾಲಿ—ಇರಲಿ ; ರಾಜಕುಮಾರರೆ, ಭಯಪಡಬೇಡಿ. ನಾವು ಸತ್ಯ ಪಕ್ಷಪಾತಿಗಳು. ಸತ್ಯಕ್ಕೆ ಸೋಲಿಲ್ಲ.

(ಪಹರಿಯೊಡನೆ ಲಿಂಗಣ್ಣ ಮಂತ್ರಿ ಗಂಭೀರವಾಗಿ ಪ್ರವೇಶಿಸುತ್ತಾನೆ. ಶಿವಯ್ಯ ದಿಗಿಲು ಬೀಳುತ್ತಾನೆ. ಲಿಂಗಣ್ಣ ಮಂತ್ರಿ ಹೈದರಾಲಿ ಮಹಮ್ಮದಾಲಿಗಳಿಗೆ ಕೈಮುಗಿಯುತ್ತಾನೆ. ಹೈದರಾಲಿ ಗೌರವದಿಂದ ಪ್ರತಿನಮಸ್ಕಾರಮಾಡುತ್ತಾನೆ ಮಹಮ್ಮದಾಲಿ ಆಗಂತುಕನನ್ನೇ ಸ್ವಲ್ಪ ಕ್ರೋಧಮಿಶ್ರವಾದ ತಿರಸ್ಕಾರದೃಷ್ಟಿಯಿಂದ ನೋಡುತ್ತಿರುತ್ತಾನೆ. ಲಿಂಗಣ್ಣನು ಶಿವಯ್ಯನ ಕಡೆ ದುರುದುರನೆ ಎವೆಯಿಕ್ಕದೆ ನೋಡುತ್ತಾನೆ. ಅದುವರೆಗೂ ಲಿಂಗಣ್ಣನನ್ನೇ ಬೆಚ್ಚುಗಣ್ಣಿನಿಂದ ನೋಡುತ್ತಿದ್ದ ಶಿವಯ್ಯ ಆಗ ತಲೆಬಾಗುತ್ತಾನೆ. ಹೈದರಾಲಿ ಇದೆಲ್ಲವನ್ನೂ ಅವಲೋಕಿಸಿ)

ಹೈದರಾಲಿ—ನೀವು ಬಿದನೂರಿನಿಂದ ಬಂದವರೋ ?

ಲಿಂಗಣ್ಣ (ಧೀರವಾಣಿಯಿಂದ)—ಹೌದು, ಸಾರ್ವಭೌಮ !

ಹೈದರಾಲಿ—ಬನ್ನಿ, ಕುಳಿತುಕೊಳ್ಳಿ.

ಲಿಂಗಣ್ಣ—ಅಪ್ಪಣೆ. (ವಂದನೆಯನ್ನು ತಲೆಬಾಗಿ ಸೂಚಿಸಿ ಕೂರುತ್ತಾನೆ.)

ಹೈದರಾಲಿ—ಬಸವಯ್ಯನವರೆ, ಇವರಾರು ? (ಲಿಂಗಣ್ಣ ವಿಸ್ಮಿತನಾಗುತ್ತಾನೆ.)

ಶಿವಯ್ಯ—ಇವರೇ ಆ ಲಿಂಗಣ್ಣ ಮಂತ್ರಿಗಳು.

ಮಹಮ್ಮದಾಲಿ—ಓಹೊ, ಪಿತೂರಿ ನಡೆಸಲು ತಲೆಯೇ ಮುಂದೆ ನುಗ್ಗಿದೆ !

ಲಿಂಗಣ್ಣ—ಮಹಾಸ್ವಾಮಿ, ಇವನು ಬಸವಯ್ಯನಲ್ಲ. ರಾಜಕುಮಾರ ಬಸವಯ್ಯನನ್ನು ನಡುದಾರಿಯಲ್ಲಿ ಮೋಸದಿಂದ ಕೊಲೆಮಾಡಿ ಬಂದಿರುವ ಶಿವಯ್ಯನಿವನು !

ಶಿವಯ್ಯ (ನಗುವನ್ನು ನಟಿಸಿ)—ಸೇನಾಪತಿಗಳೆ, ನೋಡಿ; ನಾನು ಹೇಳಿದ್ದು ನಿಜವಾಗುತ್ತಿದೆ. (ಲಿಂಗಣ್ಣನಿಗೆ) ಏನು, ಮಂತ್ರಿಗಳೆ, ಅಂತೂ ನೆರೆ ಸಿಕ್ಕಿದ ಶಿವಯ್ಯನನ್ನು ಕೊಲೆಮಾಡಿಬಿಟ್ಟಿರೇನು ? ಅಯ್ಯೋ, ಶಿವಯ್ಯ, ನನಗಾಗಿ ನೀನು ಮಡಿದೆಯಾ ? (ಶೋಕಿಸುತ್ತಾನೆ.)

ಹೈದರಾಲಿ—ಮಂತ್ರಿಗಳೆ, ನಿಮಗೆ ಈ ಪತ್ರವೆಲ್ಲಿ ಸಿಕ್ಕಿತು ?

ಲಿಂಗಣ್ಣ—ಧರ್ಮಾವತಾರ, ನನ್ನ ಬಿನ್ನಹವನ್ನು ಲಾಲಿಸಬೇಕು. ನಾನು ಬಿದನೂರು ಸಂಸ್ಥಾನದ ಮಂತ್ರಿ. ಶಿವೈಕ್ಯರಾದ ಬಸವನಾಯಕರಿಗೂ ಅವರ ಪುತ್ರನಾದ ರಾಜಕುಮಾರ ಬಸವಯ್ಯನಿಗೂ ಆಪ್ತ.

ಶಿವಯ್ಯ—ಇಲ್ಲ, ಮಹಾಸ್ವಾಮಿ. ನಮ್ಮ ತಂದೆಗೆ ಇವರು ಆಪ್ತರಾಗಿರಲಿಲ್ಲ. ಅವರನ್ನು ಕೊಲೆಮಾಡಿದವರಲ್ಲಿ ಇವರು ಒಬ್ಬರು. ನನಗೂ ಇವರು ಆಪ್ತರಲ್ಲ. ಏನೋ ಕಪಟ ಹೇಳುತ್ತಿದ್ದಾರೆ.

ಲಿಂಗಣ್ಣ (ದೃಢವಾಣಿಯಿಂದ)—ಶಿವಯ್ಯ, ನಿನ್ನನ್ನು ನಂಬಿ ಒಡನೆಬಂದ ರಾಜಕುಮಾರನನ್ನು ಹಾದಿಯಲ್ಲಿ ಕೊಂದು ಈಗ ನಾನೇ ರಾಜಕುಮಾರನೆಂದು ಹೇಳಿಕೊಳ್ಳುತ್ತಿದ್ದೀಯಾ ?

ಮಹಮ್ಮದಾಲಿ (ಶಿವಯ್ಯಗೆ)—ಬಸವಯ್ಯನವರೇ ಸ್ವಲ್ಪ ಸುಮ್ಮನಿರಿ.

ಹೈದರಾಲಿ—ಹೇಳಿ, ಮಂತ್ರಿಗಳೆ.

ಲಿಂಗಣ್ಣ—ಸ್ವಾಮಿ, ಚೆಲುವಾಂಬೆ ನಿಂಬಯ್ಯರು ನನ್ನನ್ನೂ ರಾಜಕುಮಾರ ಒಸವಯ್ಯನನ್ನೂ ಹಿಡಿದು ಸೆರೆಯಲ್ಲಿಡಿಸಿದರು. ಈ ಶಿವಯ್ಯನೂ ಹೊನ್ನಯ್ಯನೆಂಬೊಬ್ಬ ರಾಜಪುತ್ರನ ಮಿತ್ರನೂ ಸೇರಿ ನಮ್ಮಿಬ್ಬರನ್ನೂ ರಾತ್ರಿ ಸೆರೆಯಿಂದ ಬಿಡಿಸಿದರು. ನಾನಿದ್ದ ಸೆರೆಗೆ ಹೊನ್ನಯ್ಯನು ಬಂದು ನನ್ನನ್ನು ಕರೆದುಕೊಂಡು ಹೊರಗೆ ಬಂದನು. ಹೊರಗೆ ಬಂದು ನೋಡುವಲ್ಲಿ ತೃಣಾನಂದ ಪರಮಹಂಸರೆಂಬ ಸಂನ್ಯಾಸಿಗಳು ತೇಜಿಗಳನ್ನು ಸಿದ್ಧಪಡಿಸಿ ನಮಗಾಗಿ ಕಾಯುತ್ತಿದ್ದರು. ಅಲ್ಲಿ ಶಿವಯ್ಯ ಬಸವಯ್ಯರಿಗಾಗಿ ಬಹಳ ಹೊತ್ತು ಕಾದೆವು. ಅವರು ತೋರದಿರಲು ಸಂನ್ಯಾಸಿಗಳ ಸಲಹೆಯಂತೆ ನಾನೂ ಹೊನ್ನಯ್ಯನೂ ಕುದುರೆಗಳನ್ನೇರಿ ಮುಂದೆ ಹೊರಟೆವು. ಸ್ವಲ್ಪ ಹೊತ್ತು ಕಾಡಿನ ಕತ್ತಲಲ್ಲಿ ದಾರಿಗಾಣದೆ ವಕ್ರಪಥದಲ್ಲಿ ತೊಳಲಿದೆವು. ಆಗ ನಮ್ಮ ಹಿಂದಿನಿಂದ ಬಂದ ಈ ಶಿವಯ್ಯನೂ ಇವನಿಂದ ಕೊಲೆಯಾದ ಬಸವಯ್ಯನೂ ನಮ್ಮನ್ನು ಮುಂಚಿ ಮುಂದೆ ನಡೆದರು. ಸ್ವಲ್ಪ ಹೊತ್ತು ಬನಗತ್ತಲೆಯಲ್ಲಿ ತೊಳಲಿದ ಮೇಲೆ ನಮಗೆ ಸರಿದಾರಿ ಸಿಕ್ಕಿತು. ನಾನೂ ಹೊನ್ನಯ್ಯನೂ ಬರುತ್ತಿರಲು ಕುಂಸಿಯ ಬಳಿ ಒಂದು ಕಾಡಿನಲ್ಲಿ ಮಾನವ ರೋದನ ಕೇಳಿಸಿತು. ಬೇಗಬೇಗನೆ ತೇಜಿಗಳನ್ನು ಚಪ್ಪರಿಸಿ ದೌಡಾಯಿಸಿ ಬಂದೆವು. ಅಲ್ಲಿ ಒಂದೆಡೆ ಎರಡು ಕುದುರೆಗಳು ನಿಂತಿದ್ದುದನ್ನು ಕಂಡು ಗಾಬರಿಯಿಂದ ಕೆಳಗಿಳಿದೆವು. ಪಕ್ಕದಲ್ಲಿದ್ದ ಒಂದು ಮಹಾ ಪ್ರಪಾತದಿಂದ ರೋದನ ಕೇಳಿಬರುತ್ತಿತ್ತು. ಬಂಡೆಯನ್ನೇರಿ ಪ್ರಪಾತವನ್ನು ನೋಡುತ್ತಿದ್ದಾಗ ಬಸವಯ್ಯನ ತಲೆಯುಡೆ ಆ ಅರೆಯ ಮೇಲಿದ್ದುದನ್ನು ಕಂಡು ಏನೋ ಪ್ರಮಾದ ನಡೆದಿರಬೇಕೆಂದು ತಿಳಿದು ಇಬ್ಬರೂ ಪ್ರಪಾತದೊಳಗೆ ಇಳಿದೆವು. ಅಯ್ಯೋ, ಏನು ನೋಡುವುದಲ್ಲಿ! ಬಸವಯ್ಯನು ಜಜ್ಜರಿತ ದೇಹನಾಗಿ ಬಿದ್ದು ಗೋಳಿಡುತ್ತಿದ್ದನು. ಅವನಿಂದ ಎಲ್ಲ ಗೊತ್ತಾಯಿತು. ಈ ಶಿವಯ್ಯ ಅವನನ್ನು ಕೆಳಗೆ ತಳ್ಳಿ, ನಾವು ಅಲ್ಲಿಗೆ ಬರಲು ಎಲ್ಲಿಯೋ ಅವಿತುಕೊಂಡಿದ್ದು, ನಾವು ಕಂದರದೊಳಗಿಳಿಯಲು ಅಲ್ಲಿದ್ದ ಕುದುರೆಯೊಂದನ್ನೇರಿ ಇಲ್ಲಿಗೆ ಬಂದಿದ್ದಾನೆ. ಏಕೆಂದರೆ, ಪುನಃ ನಾವು ಅಲ್ಲಿಗೆ ಬಂದು ನೋಡಿದಾಗ ಅಲ್ಲಿ ಒಂದೇ ಕುದುರೆಯಿತ್ತು. ಬಸವಯ್ಯನು ಸಾಯುವಾಗ ನನಗೆ ಈ ಪತ್ರವನ್ನು ಕೊಟ್ಟು ತಮ್ಮೆಡೆಗೆ ಹೋಗುವಂತೆ ಹೇಳಿದನು. ರಾಜಕುಮಾರನ ಮೃತದೇಹವನ್ನು ಮುಂದೇನು ಮಾಡಬೇಕೆಂದು ಯೋಚಿಸುತ್ತಿದ್ದಾಗಲೇ ಖುರಪುಟ ಧ್ವನಿ ಕೇಳಿಸಿತು. ನಮ್ಮನ್ನು ಹಿಡಿಯಲು ನಿಂಬಯ್ಯನು ಅಟ್ಟಿದ ಆಳುಗಳೆಂದು ಊಹಿಸಿದೆವು. ಮಿತ್ರನಾದ ರಾಜಕುಮಾರನ ದೇಹಸಂಸ್ಕಾರದಲ್ಲಿ ಮನಸ್ಸಿಟ್ಟು ನನ್ನನ್ನು ಮಾತ್ರ ತಮ್ಮಲ್ಲಿಗೆ ಓಡುವಂತೆ ಹೇಳಿ ಹೊನ್ನಯ್ಯನು ಏನೋ ಉಪಾಯ ಮಾಡುವೆನು ಎಂದು ಅಲ್ಲಿಯೇ

ನಿಂತನು. ಅವನ ಗತಿ ಏನಾಯಿತೋ ನಾನರಿಯೆ! ನೀವು ಈ ಶಿವಯ್ಯನನ್ನು 'ಬಸವಯ್ಯ' 'ರಾಜಕುಮಾರ' ಎಂದು ಸಂಬೋಧಿಸುವುದನ್ನು ನೋಡಿದರೆ ಇವನು ನಿಮ್ಮೆಲ್ಲರನ್ನೂ ಮೋಸಗೊಳಿಸಿ ತಾನೇ ಬಸವಯ್ಯನೆಂದು ಹೇಳಿಕೊಂಡಿರಬೇಕೆಂದು ತೋರುತ್ತದೆ. ಸಾರ್ವಭೌಮ, ಈಶ್ವರ ಸಾಕ್ಷಿಯಾಗಿ ನಾನು ಸತ್ಯವನ್ನೆಲ್ಲ ತಮ್ಮೆದುರು ಬಿಚ್ಚಿಟ್ಟಿದ್ದೇನೆ. ಪರಾಮರ್ಶಿಸಬೇಕು.

ಹೈದರಾಲಿ—ಮಹಮ್ಮದಾಲಿಯವರೆ, ಕಥೆಯೇನೂ ಬಹಳ ಸ್ವಾರಸ್ಯವಾಗಿದೆ!—ಬಸವಯ್ಯನವರೆ, ಇದಕ್ಕೆ ನೀವೇನು ಹೇಳುತ್ತೀರಿ?

ಶಿವಯ್ಯ—ಮಹಾಪ್ರಭೂ, ಇವರು ಹೇಳಿದುದೆಲ್ಲ ಸುಳ್ಳು. ಕೈಸೆರೆ ಸಿಕ್ಕಿದ ಶಿವಯ್ಯನನ್ನು ಕೊಂದೇ ಈ ಕಾಗದ ತಂದಿದ್ದಾರೆ, ಪಿತೂರಿ ನಡೆಸಲೆಂದು! ನಿಜವೆಲ್ಲವನ್ನೂ ನಾನು ತಮಗಾಗಲೆ ಅರುಹಿದ್ದೇನೆ. ಇವರ ಒಳಸಂಚಿಗೆ ಸಿಕ್ಕಿ ತೀರಿಹೋದ ಬಸವನಾಯಕರ ಏಕಮಾತ್ರ ಪುತ್ರನಾದ ಬಸವಯ್ಯ ನಾನೆ! ನನ್ನ ಮೇಲೆ ಕೃಪೆದೋರಬೇಕು.

ಲಿಂಗಣ್ಣ—ಎಲವೋ ಶಿವಯ್ಯ, ಇದಕ್ಕಾಗಿಯೆ ನಮ್ಮನ್ನು ಸೆರೆಯಿಂದ ಬಿಡಿಸಿದೆಯಾ?

ಶಿವಯ್ಯ—ಸುಳ್ಳಾಡಬೇಡಿ.—(ಹೈದರನಿಗೆ) ಮಹಾಪ್ರಭೂ, ಇವರು ಸೆರೆಯಲ್ಲಿದ್ದುದೇ ಸುಳ್ಳು!

ಮಹಮ್ಮದಾಲಿ—ಲಿಂಗಣ್ಣ ಮಂತ್ರಿಗಳೆ, ಇಷ್ಟು ವಯಸ್ಸಾಗಿಯೂ ನೀವೇಂತಹ ಘೋರ ಕೃತ್ಯವನು ನಡೆಸಿ, ಈಗ ಪಿತೂರಿಗೆ ಹೊರಟಿದ್ದೀರಾ? ನಿಮಗೆ ಮರಣ ದಂಡನೆಯೇ ತಕ್ಕ ಪ್ರಾಯಶ್ಚಿತ್ತವಾಗಬೇಕು!

ಲಿಂಗಣ್ಣ—ಸೇನಾಪತಿಗಳೆ, ವೀರರು ಸಾಯಲಂಜುವುದಿಲ್ಲ. ಸತ್ಯಕ್ಕಾಗಿ ಸಾಯುವುದೇ ನನಗೆ ಶ್ರೇಯಸ್ಕರ.—ಇವನು ಬಸವಯ್ಯನಲ್ಲ! ಆತನ ಕೊಲೆಗಾರನಾದ ಶಿವಯ್ಯನಿವನು! ನಾನು ನಿಮ್ಮಲ್ಲಿಗೇ ಬಂದಿದ್ದೇನೆ. ವಿಚಾರಮಾಡಿ, ನನ್ನದು ಸುಳ್ಳಾಗಿದ್ದರೆ ಮರಣದಂಡನೆಯನ್ನೇ ವಿಧಿಸಿ.

ಮಹಮ್ಮದಾಲಿ (ಶಿವಯ್ಯನನು ತೋರಿಸಿ)—ನಿಮ್ಮ ಸುಳ್ಳಿಗೆ ಇವರೇ ಸಾಕ್ಷಿ!

ಹೈದರಾಲಿ—ಇರಲಿ, ನಾನೀಗ ಸತ್ಯವನ್ನು ಗೊತ್ತುಮಾಡುತ್ತೇನೆ. ರಂಗದಾಸನನ್ನು ಬರಮಾಡಿ.

ಮಹಮ್ಮದಾಲಿ (ಪಹರಿಗೆ)—ಹೋಗು, ರಂಗದಾಸರನ್ನು ಕರೆದುತಾ.

(ಶಿವಯ್ಯನು ಬೆಚ್ಚಿ ನಡುಗುತ್ತಾನೆ.)

ಹೈದರಾಲಿ—ಬೆದರಬೇಡಿ, ಬಸವಯ್ಯನವರೆ. ಮಂತ್ರಿಗಳ ಮಿಥ್ಯೆ ಈಗಲೇ ಹೊರಬೀಳುತ್ತದೆ.

(ಪಹರಿ ಬ್ರಹ್ಮಚಾರಿ ವೇಷದ ರಂಗದಾಸನೊಡನೆ ಬರುತ್ತಾನೆ. ರಂಗದಾಸನು ಹೈದರಾಲಿಗೂ ಮಹಮ್ಮದಾಲಿಗೂ ನಮಿಸಿ ಲಿಂಗಣ್ಣ ಮಂತ್ರಿಗಳ ಕಡೆ ತಿರುಗಿ)

ಬ್ರಹ್ಮಚಾರಿ—ಲಿಂಗಣ್ಣಾ ಮಂತ್ರಿಗಳಿಗೆ ನಮಸ್ಕಾರ!

ಲಿಂಗಣ್ಣ—ನಮಸ್ಕಾರ.

ಬ್ರಹ್ಮಚಾರಿ (ಶಿವಯ್ಯನಿಗೆ)—ಶಿವಯ್ಯನವರೆ, ನಮಸ್ಕಾರ!

ಶಿವಯ್ಯ (ಬೆಚ್ಚಿಬಿದ್ದು)—ನೀವು ನನ್ನನ್ನು ಮರೆತಂತಿದೆ. ನಾನು ಶಿವಯ್ಯನಲ್ಲ; ಬಸವಯ್ಯ.

ಬ್ರಹ್ಮಚಾರಿ (ಹಸಿತವದನನಾಗಿ)—ಎಂದಿನಿಂದ, ಸ್ವಾಮಿ?

ಹೈದರಾಲಿ—ರಂಗದಾಸರೆ, ನಿಮಗೆ ಇವರಿಬ್ಬರ ಪರಿಚಯವಿದೆಯೇ?

ಬ್ರಹ್ಮಚಾರಿ—ಚೆನ್ನಾಗಿದೆ, ಮಹಾಪ್ರಭೂ! (ಲಿಂಗಣ್ಣನನ್ನು ತೋರಿಸಿ) ಇವರೇ ಮಹಾನುಭಾವರಾದ ಲಿಂಗಣ್ಣಾ ಮಂತ್ರಿಗಳು! (ಶಿವಯ್ಯನನ್ನು ನಿರ್ದೇಶಿಸಿ) ಇವನ ಹೆಸರು ಶಿವಯ್ಯ!

ಶಿವಯ್ಯ—ಸ್ವಾಮಿ, ಇವರಿಗೆ ನನ್ನ ಪರಿಚಯ ಮರೆತುಹೋಗಿರಬೇಕು. ಇಲ್ಲದಿದ್ದರೆ ಇವರೂ ಪಿತೂರಿಗೆ ಸೇರಿರಬೇಕು. ಕಾಪಾಡಬೇಕು, ಮಹಾಪ್ರಭೂ!

ಮಹಮ್ಮದಾಲಿ—ಲಿಂಗಣ್ಣಾ ಮಂತ್ರಿಗಳೆ, ಈ ರಂಗದಾಸರ ಪರಿಚಯವಿದೆಯೇ, ನಿಮಗೆ?

ಲಿಂಗಣ್ಣ—ಇವರು ರಂಗದಾಸರೆಂದು ನನಗೆ ತಿಳಿಯದು. ತೃಣಾನಂದ ಪರಮ ಹಂಸರ ಶಿಷ್ಯರೆಂದು ಮಾತ್ರ ಬಲ್ಲೆ.

ಹೈದರಾಲಿ (ಕೋಪದಿಂದ ಶಿವಯ್ಯನನ್ನು ನೋಡಿ)—ನಮ್ಮ ಕಣ್ಣಿಗೂ ಮಣ್ಣೆರಚಲೆಂದು ಬಗೆದೆಯೋ? (ರಂಗದಾಸಗೆ) ಇವನು ಶಿವಯ್ಯನೆಂದು ಚೆನ್ನಾಗಿ ಗೊತ್ತೆ?

ಬ್ರಹ್ಮಚಾರಿ—ಹೌದು, ಮಹಾಸ್ವಾಮಿ, ನಾನು ಚೆನ್ನಾಗಿ ಬಲ್ಲೆ!

ಹೈದರಾಲಿ—ಸೇನಾಪತಿಗಳೆ, ಇನ್ನು ವಿಚಾರಣೆ ಸಾಕು. ಇವನನ್ನು ಸೆರೆಯಲ್ಲಿಡಿಸಿ. ಈ ರಾತ್ರಿಯೆ ಶೂಲಕ್ಕೇರಿಸಬೇಕು.

ಮಹಮ್ಮದಾಲಿ—ಸಯ್ಯದ್, ಈ ಶಿವಯ್ಯನನ್ನು ಬಂಧಿಸು.

(ಪಹರಿ ಶಿವಯ್ಯನಿಗೆ ಕೋಳ ಹಾಕುತ್ತಾನೆ.)

ಶಿವಯ್ಯ (ಮೊಳಕಾಲೂರಿ ದೈನ್ಯದಿಂದ)—ಮಹಾಪ್ರಭೂ, ಮರೆಹೊಕ್ಕಿದ್ದೇನೆ. ತಪ್ಪಾಯ್ತು; ಕಾಪಾಡಬೇಕು!—ಲಿಂಗಣ್ಣಾ ಮಂತ್ರಿಗಳೆ, ರಕ್ಷಿಸಿ!

ಹೈದರಾಲಿ—ಕೊಲೆಪಾತಕಾ, ನಿನಗೆ ಮರಣವೇ ಶರಣು! ಎಳೆದುಕೊಂಡು ಹೋಗು, ಸಯ್ಯದ್. (ಪಹರಿ ಶಿವಯ್ಯನನ್ನು ಎಳೆದುಕೊಂಡು ಹೋಗುತ್ತಾನೆ.)

ಲಿಂಗಣ್ಣ—ಮಹಾಸ್ವಾಮಿ, ಅವನನ್ನು ಇಂದೇ ಶೂಲಕ್ಕೇರಿಸುವುದು ಬೇಡ. ಬಿದನೂರಿನ ಅಪರಾಧಿಗಳೆಲ್ಲ ಅವನಿಂದ ಬಯಲಿಗೆ ಬೀಳುವರು.

**ಹೈದರಾಲಿ**—ಆಗಲಿ, ನಿಮ್ಮ ಮಾತಿನಂತೆಯೆ ನಡೆಸುತ್ತೇನೆ. (ರಂಗದಾಸಗೆ) ರಂಗದಾಸರೆ, ಈ ವಿಚಾರವನ್ನು ಸೆರೆಗಾಹಿಗಳಿಗೆ ತಿಳಿಸಿ.

(ರಂಗದಾಸನು ಕೈಮುಗಿದು ಹೋಗುವನು.)

**ಮಹಮ್ಮದಾಲಿ**—ಲಿಂಗಣ್ಣ ಮಂತ್ರಿಗಳೆ, ನಾನು ತಿಳಿಯದೆ ಆಡಿದ ಕಠಿನ ವಾಕ್ಯಗಳನ್ನು ಮನ್ನಿಸಬೇಕೆಂದು ಬೇಡುತ್ತೇನೆ. ಇನ್ನು ಮೇಲೆ ನೀವು ನಮ್ಮಾಪ್ತರು.

**ಲಿಂಗಣ್ಣ**—ತಾವು ಹಾಗೆ ಬೇಡುವುದುಂಟೆ? ಇಂತಹ ಸಮಯದಲ್ಲಿ ಎಂತಹರೂ ತಪ್ಪುವರು! ತಿಳಿದವರು ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ.

**ಹೈದರಾಲಿ** (ಮುಗುಳ್ನಗುತ್ತ)—ಮಂತ್ರಿಗಳೆ, ತಮ್ಮ ಕಾರ್ಯದಕ್ಷತೆಯ ವಿಚಾರವಾಗಿ ನಾನು ಈ ಮೊದಲೇ ಕೇಳಿದ್ದೇನೆ. ಆದ್ದರಿಂದಲೇ ನಾನು ದುಡುಕಲಿಲ್ಲ. (ಮಹಮ್ಮದಾಲಿ ನಾಚಿ ತಲೆಬಾಗುವನು.) ಆದುದಾಯಿತು. ನಾವು ನಾಳೆಯೇ ಬಿದನೂರಿಗೆ ಹೊರಡುವೆವು.

**ಲಿಂಗಣ್ಣ** (ದುಃಖದಿಂದ)—ಬಸವಯ್ಯನ ಸಾವಿನಿಂದ ನನ್ನ ಕೈ ಮುರಿದು ಹೋದಂತಿದೆ. ಏನಾದರೇನು? ನಮ್ಮ ರಾಜವಂಶ ಹಾಳಾಯಿತು.

**ಹೈದರಾಲಿ**—ದುಷ್ಟರನ್ನು ಶಿಕ್ಷಿಸುವುದಾದರೂ ಬೇಡವೇ?

**ಲಿಂಗಣ್ಣ**—ಅದೊಂದೇ ಇನ್ನು ನನಗುಳಿದಿರುವ ಆಕಾಂಕ್ಷೆ.

[ಪರದೆ ಬೀಳುವುದು.]

## ದೃಶ್ಯ ೫

(ಬಿದನೂರಿನ ಅರಮನೆಯಲ್ಲಿ ಸಿಂಬಯ್ಯ, ಚೆಲುವಾಂಬೆ, ಸೋಮಯ್ಯ ಮಾತಾಡುತ್ತಿರುವರು.)

**ಚೆಲುವಾಂಬೆ**—ಸೋಮಯ್ಯ, ನೀನು ಹೇಳುವುದು ಬಹಳ ವಿಚಿತ್ರವಾಗಿದೆ. ಬಸವಯ್ಯನನು ಹೊನ್ನಯ್ಯನೇ ಸಂಹರಿಸಿದನೆ?

**ಸಿಂಬಯ್ಯ**—ನನಗೇನೋ ಸಂದೇಹವೇ. ಅವರಿಬ್ಬರೂ ಪ್ರಾಣಸ್ನೇಹಿತರಾಗಿದ್ದರು. ಇದರೊಳಗೇನೋ ರಹಸ್ಯವಿರಬೇಕು.

**ಸೋಮಯ್ಯ**—ನಾನೇ ಕಣ್ಣಾರೆ ಕಂಡಿದ್ದೇನೆ; ಹೊನ್ನಯ್ಯನು ಬಸವಯ್ಯನನು ತಿವಿದುಕೊಂಡು ರಕ್ತಮಯವಾದ ಖಡ್ಗವನ್ನು ಕೈಯಲ್ಲಿ ಹಿಡಿದುಕೊಂಡು ಭಯಾನಕವಾಗಿ ನಿಂತಿದ್ದನು. ಆ ದೃಶ್ಯವನು ನೆನೆದೆನೆಂದರೆ ನನಗಿನ್ನೂ ಮೈನವಿರೆದ್ದು ನಿಲ್ಲುವುದು. ಅದುವರೆಗೂ ಹೊನ್ನಯ್ಯನು ಅಂತಹ ಕಾರ್ಯದಲ್ಲಿ ಕೈಹಾಕಬಲ್ಲನೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ.

**ಚೆಲುವಾಂಬೆ**—ಹಾಗಾದರೆ ಹೊನ್ನಯ್ಯ ಅವರೊಡನೆ ಓಡಿಹೋದವನಲ್ಲ ?

**ಸೋಮಯ್ಯ**—ಇಲ್ಲ, ಎಂದಿಗೂ ಇಲ್ಲ. ಶಿವಯ್ಯನೇ ಕಾರಣ ಅವರಿಬ್ಬರನೂ ಸೆರೆ ಮನೆಯಿಂದ ಕದ್ದೊಯ್ದುದು. ಹೊನ್ನಯ್ಯ ಸಂಪೂರ್ಣವಾಗಿ ನಿರ್ದೋಷಿ. ಮನಸಿಲ್ಲದ ಮನಸ್ಸಿನಿಂದ, ಬಿದನೂರು ಅನ್ಯಾಯವಾಗಿ ಪರರಾಜರ ಕೈವಶ ವಾಗುವುದಲ್ಲಾ ಎಂದು, ಆ ಕೆಲಸ ಮಾಡಿದ್ದಾನೆ. ಆತನ ದೇಶಭಕ್ತಿ ನಿರುಪಮ. ದೇಶಕ್ಕಾಗಿ ಬಾಲ್ಯಸ್ನೇಹಿತನನ್ನೇ ಬಲಿದಾನ ಮಾಡಿದ್ದಾನೆ.

**ನಿಂಬಯ್ಯ**—ಲಿಂಗಣ್ಣ ಶಿವಯ್ಯರೆಲ್ಲಿಗೆ ಓಡಿದರು ?

**ಸೋಮಯ್ಯ**—ಏನೋ ಅದು ತಿಳಿಯದಿದೆ.

**ಚೆಲುವಾಂಬೆ**—ಹೊನ್ನಯ್ಯನೆಲ್ಲಿ ?

**ಸೋಮಯ್ಯ**—ರುದ್ರಯ್ಯನು ಅವನನ್ನು ಕರೆದುಕೊಂಡು ಬರುತ್ತಿದ್ದಾನೆ. ಮಿತ್ರ ಹತ್ಯೆ ಆತನನ್ನು ದುಃಖಸಾಗರದಲ್ಲಿ ಮುಳುಗಿಸಿಬಿಟ್ಟಿದೆ.

**ಚೆಲುವಾಂಬೆ**—ನಿಂಬಯ್ಯ, ಮುಂದೇನು ಕೇಡಹುದೊ ನಾನರಿಯೆ. ಲಿಂಗಣ್ಣ ಮಂತ್ರಿಗಳು ಸುಮ್ಮನೆಯೆ ಬಿಡುವರೇ ? ಯಾವ ದೊರೆಯನು ಕೂಡಿ ದಂಡೆತ್ತಿ ಬರಲೆಂದು ಹೋಗಿರುವರೋ ? ಆತನ ದ್ವೇಷವು ಕೃಷ್ಣಸರ್ಪದ ದ್ವೇಷದಂತೆ ಮುಯ್ಯಿ ತೀರಿಸಿಕೊಳ್ಳದೆ ಬಿಡದು.

**ನಿಂಬಯ್ಯ**—ಅಹುದು ; ಆ ಮುದುಕನೊಂದು ಜ್ವಾಲಾಮುಖಿ.—ಆದರೂ ನಿನಗೆ ಬೆದರಿಕೆ ಬೇಡ. ಅಸುವಿರುವವರೆಗೆ ನಿನಗಾಗಿ ಹೋರಾಡುವೆನು.

**ಸೋಮಯ್ಯ**—ಹೊರಗಿನ ರಾಜರು ದಂಡೆತ್ತಿಬರುವ ಮಾತು ಹಾಗಿರಲಿ. ನಮ್ಮ ಜನರೇ ದಂಗೆಯೇಳುವ ಸಂದರ್ಭವಿದೆ. ಹೊನ್ನಯ್ಯನು ರಾಜಪುತ್ರನನು ಕೊಂದನೆಂಬ ಸುದ್ದಿ ಕಾಡುಕಿಚ್ಚಿನಂತೆ ಊರೊಳಗೆಲ್ಲ ಹಬ್ಬಿದೆ. ಜನರು ಉದ್ರೇಕಗೊಂಡಿದ್ದಾರೆ. ನಗರದಲ್ಲಿ ಎಲ್ಲೆಡೆಯೂ ಕೋಲಾಹಲ ಮೊಳೆದೋರು ತಿದೆ. ನಾವು ಉದಾಸೀನಮಾಡಿದರೆ ಸನ್ನಿವೇಶ ದುರ್ದಮ್ಯವಾಗಬಹುದು.

**ನಿಂಬಯ್ಯ**—ಜನರ ಭಯವಂತಿರಲಿ, ಸೋಮಯ್ಯ. ಹೊನ್ನಯ್ಯನ ಸಮಸ್ಯೆ ನನಗೆ ದುರ್ಭೇದ್ಯವಾಗಿದೆ ! ಆತನಮೇಲೆ ಗುಪ್ತವಾಗಿ ಕಾವಲಿಡಬೇಕು. ಅಂತಹ ಆದರ್ಶವಾದಿಗಳ ಸೌಮ್ಯತೆ ಸಿಡಿಲನಡಗಿಸಿಕೊಂಡಿರುವ ಕಾರ್ಮುಗಿಲಿನ ಗಾಂಭೀರ್ಯದಂತೆ ಅಪಾಯಕರ.

**ಸೋಮಯ್ಯ**—ಅವರೇ ಬರುತ್ತಿದ್ದಾರೆ.

(ರುದ್ರಯ್ಯನು ಪ್ರವೇಶಿಸುವನು. ಅವನ ಹಿಂದೆ ಹೊನ್ನಯ್ಯನು ದುಃಖಭಾವದಿಂದ ಮೆಲ್ಲಗೆ ಬರುತ್ತಾನೆ. ಹಿಂದುಗಡೆ ತಿಮ್ಮ ಜಟ್ಟಿ ಇರುವನು )

**ಚೆಲುವಾಂಬೆ**—ಬಾ, ಹೊನ್ನಯ್ಯ. ನಿನ್ನಿಂದ ಮಹದುಪಕಾರವಾಗಿದೆ.

ಹೊನ್ನಯ್ಯ (ದುಃಖದಿಂದ)—ದೇವಿ, ರಾಜ್ಯದ ಶ್ರೇಯಸ್ಸಿಗಾಗಿ ಗೆಳೆಯನನು ಕೊಂದೆ. ಬಹುಜನರ ಹಿತಕಾಗಿ ನನ್ನೆದೆಗೆ ನಾನೆ ಇರಿದುಕೊಂಡೆ. ಆದರೆ ಮಿತ್ರಹತ್ಯಾ ಯಾತನೆ ಪೀಡಿಸುತ್ತಿದೆ. ನಾನೆಸಗಿದುದು ಬಹು ಘೋರ ಕರ್ಮ.

ನಿಂಬಯ.—ಹೊನ್ನಯ್ಯ, ನೀನು ಮಾಡಿದ ಕಾರ್ಯ ಅಧರ್ಮವಲ್ಲ. ಜನ್ಮಭೂಮಿಯ ಮೇಲ್ಮೆಗಾಗಿ ಮಾಡಿದ ಕರ್ಮವಾವುದೂ ದುಷ್ಕೃತವೆಂದು ಪರಿಗಣಿತ ವಾಗದು.—ನಿನಗಾವ ಪದವಿ ಬೇಕಾದರೂ ಅದನಿತ್ತು ಸನ್ಮಾನಮಾಡುವೆವು.

ರುದ್ರಯ್ಯ—ಹೊನ್ನಯ್ಯನವರ ಪರವಾಗಿ ನನ್ನದೊಂದು ಬಿನ್ನಹವಿದೆ. ಅವರು ನಾಡಿನ ಮೇಲ್ಮೆಗಾಗಿ ಗೆಳೆಯನನ್ನೇನೋ ಸಂಹರಿಸಿದರು. ಆದರೆ ಬಸವಯ್ಯ ನವರು ಸಾಯುವಾಗ ತಮ್ಮ ದೇಹಕ್ಕೆ ಸಂಸ್ಕಾರವೆಸಗಬೇಕೆಂದು ಬೇಡಿದ ರಂತೆ. ಆದ್ದರಿಂದ ರಾಜಕುಮಾರರ ಮೃತದೇಹವನ್ನು ಅವರಿಗೊಪ್ಪಿಸಬೇ ಕೆಂದು ಪ್ರಾರ್ಥನೆ.

ಚೆಲುವಾಂಬೆ—ಹೊನ್ನಯ್ಯ, ನಿನ್ನಿಷ್ಟದಂತೆ ನಡೆಯಬಹುದು.

ನಿಂಬಯ್ಯ—ಆದರೆ ಕಳೇಬರಕ್ಕೆ ಬಹಿರಂಗ ಸಂಸ್ಕಾರ ನಡೆಯಲಾಗದು. ಜನರು ಉದ್ರೇಕಗೊಳ್ಳುತ್ತಾರೆ.

ಹೊನ್ನಯ್ಯ—ಹಾಗೆಯೆ ಆಗಲಿ.

ನಿಂಬಯ್ಯ—ತಿಮ್ಮಜಟ್ಟಿ, ನೀನೂ ನೆರವಾಗು ಹೊನ್ನಯ್ಯನಿಗೆ.

ತಿಮ್ಮಜಟ್ಟಿ—ಅಪ್ಪಣೆ.

ಹೊನ್ನಯ್ಯ—ದೇವಿ, ನಾನೀಗ ಹೊರಡುವೆನು. ನನ್ನ ಬಗೆ ಕದಡಿಹೋಗಿದೆ. ನಾಳೆ ಬಂದು ಕಾಣುತ್ತೇನೆ.

ಚೆಲುವಾಂಬೆ—ಹಾಗೆಯೇ ಮಾಡು.—ನಿನಗಾರ ಭಯವೂ ಬೇಡ. ನಿನ್ನನು ಪೊರೆ ಯುವ ಭಾರ ನಮ್ಮದು. (ಹೊನ್ನಯ್ಯ ಹೋಗುವನು.)

ರುದ್ರಯ್ಯ—ಏನಿದು ಗೂಢಚರರಿಬ್ಬರೂ ಓಡಿಬರುತ್ತಿರುವರು!

(ಗೂಢಚರರಿಬ್ಬರೂ ಬರುವರು. ನಿಂಬಯ್ಯನು ಗಾಬರಿಯಿಂದ)

ನಿಂಬಯ್ಯ—ಏನು ಬಂದಿರಿ? ಏನು ಸುದ್ದಿ?

ಒಂದನೆ—ಸ್ವಾಮಿ, ಹೈದರಾಲಿಯವರ ಸೇನೆ ಶಿವಮೊಗ್ಗೆಗೆ ಬಂದಿಳಿದಿದೆ. ನಾಳೆಯೆ ಬಿದನೂರಿಗೆ ದಾಳಿಯಿಡುವರಂತೆ. ಲಿಂಗಣ್ಣಮಂತ್ರಿಗಳೂ ರಾಜಕುಮಾರ ಬಸವಯ್ಯನವರೂ ಅವರೊಡನೆ ಇದ್ದಾರಂತೆ.

ನಿಂಬಯ್ಯ—ಏನೈ ನೀನಾಡುವುದು? ಬಸವಯ್ಯ ಮೃತನಾಗಿದ್ದಾನೆ.

ಎರಡನೆ—ಸ್ವಾಮಿ, ನಾವರಿಯೆವು. ಹೈದರಾಲಿಯವರ ಪಾಳೆಯದಲ್ಲೆಲ್ಲ ಆ ಸುದ್ದಿ ಹಬ್ಬಿತ್ತು.

ರುದ್ರಯ್ಯ—ಆತನೇ ಶಿವಯ್ಯನಿರಬೇಕು.

ಚೆಲುವಾಂಬೆ—ನಾನಾಡಿದುದು ನಿಜವಾಯಿತು. ನಾವಿನ್ನು ಸಿದ್ಧರಾಗಬೇಕು.

ನಿಂಬಯ್ಯ—ರುದ್ರಯ್ಯ, ಸೇನೆಗಳನ್ನು ಸಿದ್ಧಪಡಿಸು. ಸೈನಿಕರೆಲ್ಲರಿಗೂ ವಿಶೇಷ ಬಹುಮಾನಗಳನ್ನು ಹಂಚಿ ಹುರಿದುಂಬಿಸು. ಪಟ್ಟಣದಲ್ಲಿ ಬೀದಿಬೀದಿಯಲ್ಲಿಯೂ ಸುಸಜ್ಜಿತ ಭಟರನ್ನು ನಿಲಿಸಿ ಜನರು ದಂಗೆಯೇಳದಂತೆ ನೋಡಿಕೊಳ್ಳಬೇಕು. (ರುದ್ರಯ್ಯ ನಮಿಸಿ ತೆರಳುವನು.) ಗೂಢಚರರೆ, ನೀವೂ ನಡೆಯಿರಿ. ವಿಶೇಷ ವರ್ತಮಾನಗಳೇನಿದ್ದರೂ ಜಾಗರೂಕತೆಯಿಂದ ನನಗೆ ಮುಟ್ಟಿಸಬೇಕು.

ಒಂದನೆ }
ಎರಡನೆ } —ಅಪ್ಪಣೆ. (ಬಾಗಿ ಕೈಮುಗಿದು ಹೋಗುವರು)

ನಿಂಬಯ್ಯ (ಸೋಮಯ್ಯನಿಗೆ)—ನೀನೂ ನಡೆ. ಸೈನ್ಯಕಾರ್ಯದಲ್ಲಿ ರುದ್ರಯ್ಯನಿಗೆ ನೆರವಾಗು. ನಾನೂ ನಿನ್ನ ಹಿಂದೆಯೆ ಬರುತ್ತೇನೆ ಎಂದು ಅವರಿಗೆಲ್ಲ ತಿಳಿಸು. (ಸೋಮಯ್ಯ ಹೊರಡುವನು) ತಿಮ್ಮಜಟ್ಟಿ !

ತಿಮ್ಮಜಟ್ಟಿ—ಮಹಾಸ್ವಾಮಿ !

ನಿಂಬಯ್ಯ—ನಿನ್ನ ಅಜಾಗರೂಕತೆಯಿಂದ ಎಷ್ಟು ಅನಾಹುತವಾಗಿದೆ ಎಂದು ನಿನಗೆ ತಿಳಿದಿದೆಯೋ ?

ತಿಮ್ಮಜಟ್ಟಿ—ಮಹಾಸ್ವಾಮಿ, ನಾವು ಸೆರೆಮನೆಗೆ ಹೋಗುವ ಮೊದಲೇ ಅವರು ತಪ್ಪಿಸಿಕೊಂಡು ಹೋಗಿದ್ದರು.

ನಿಂಬಯ್ಯ—ಇರಲಿ, ವಿಚಾರಣೆಗೆ ಈಗ ಸಮಯವಿಲ್ಲ—ಶವಸಂಸ್ಕಾರದಲ್ಲಿ ಸಹಾಯವಾಗುವ ನೆವದಿಂದ ನೀನು ಹೊನ್ನಯ್ಯನ ಮೇಲೆ ಕಾವಲಿದ್ದು ರಹಸ್ಯಗಳೇನಾದರೂ ಹೊರಬಿದ್ದರೆ ಕೂಡಲೇ ಬಂದು ತಿಳುಹಬೇಕು. ತಿಳಿಯಿತೇ ?

ತಿಮ್ಮಜಟ್ಟಿ—ಅಪ್ಪಣೆ, ಮಹಾಸ್ವಾಮಿ !

ನಿಂಬಯ್ಯ—ನೀನೀಗ ಹೊರಡಬಹುದು. (ಜಟ್ಟಿ ಹೋಗುವನು.)

ಚೆಲುವಾಂಬೆ—ಪ್ರಿಯತಮ, ಹೈದರಾಲಿಯಂತಹ ಬಲಶಾಲಿಯನ್ನು ನಾವು ಗೆಲ್ಲುವೆವೆ?

ನಿಂಬಯ್ಯ—ಹೋರಾಡಿ ಗೆಲ್ಲುವುದಾಗದಿದ್ದರೆ ಹಣದಿಂದ ಗೆದ್ದರಾಯಿತು.

ಚೆಲುವಾಂಬೆ—ಹೇಗಾದರೂ ಮಾಡಿ ಹಣದಿಂದ ಗೆಲ್ಲುವ ಆಲೋಚನೆಯನ್ನೇ ಮಾಡಬೇಕು. ಅದಕ್ಕಾಗಿ ನಾಲ್ಕು ಲಕ್ಷ ವರಹಗಳನ್ನು ಕೊಡಲು ನಾನು ಸಿದ್ಧಳಾಗಿದ್ದೇನೆ.

ನಿಂಬಯ್ಯ—ಆಗಲಿ, ಪ್ರಿಯೆ, ಚೆನ್ನಾಗಿ ಆಲೋಚಿಸಿ ನಾಳೆಯೆ ದೂತನನ್ನು ಅಟ್ಟುತ್ತೇನೆ.—ನಿನಗಾ ಚಿಂತೆ ಬೇಡ; ಅಂತಃಪುರಕ್ಕೆ ಹೋಗಿ ವಿಶ್ರಾಂತಿ ತೆಗೆದುಕೊ. ನಾನೀಗ ಹೋಗಿ ಸೈನಿಕರನ್ನು ಕಾಣುತ್ತೇನೆ. (ನಿಂಬಯ್ಯನು ಚಿಂತಾಮಗ್ನನಾಗುವನು. ರಾಣಿ ಅವನನ್ನು ನೋಡುತ್ತ ನೋಡುತ್ತ ತೆರಳುವಳು.) ಸಮಸ್ಯೆಯ

ಮೇಲೆ ಸಮಸ್ಯೆ! ಎಲ್ಲ ವಿಚಿತ್ರವಾಗಿದೆ! ಬಸವಯ್ಯನನು ಹೊನ್ನಯ್ಯ ಕೊಂದನಂತೆ! ಹೈದರನು ಶಿವಮೊಗ್ಗೆಯಲ್ಲಿ ಬೀಡುಬಿಟ್ಟಿರುವನಂತೆ! ಶಿವಯ್ಯ ಲಿಂಗಣ್ಣರು ಅವನೊಡನೆ ಸೇರಿ ಬಿದನೂರಿಗೆ ದಾಳಿಯಿಡುವರಂತೆ! ರುದ್ರಾಂಬೆ ಮಂಗಳಮಾಯವಾದಳಂತೆ! ಸಮಸ್ಯೆಯು ಮೇಲೆ ಸಮಸ್ಯೆ! ಇರಲಿ, ಚೆಲುವಾಂಬೆಯ ಚೆಲ್ವಿಗಾಗಿ ಬಿದನೂರೆಲ್ಲವೂ ನಾಶವಾದರೂ ನಾಶವಾಗಲಿ! ನನ್ನ ಜೀವವಾದರೂ ಬಲಿಯಾಗಲಿ! ತುದಿಯುವರೆಗೆ ಧರ್ಮವೋ ಅಧರ್ಮವೋ ಸರ್ವಪ್ರಯತ್ನಗಳನ್ನೂ ಮಾಡುವೆನು! ನನ್ನ ಪ್ರೇಮದ ಅಗಾಧತೆಗೆ ನನ್ನ ಸಾಹಸವೇ ಸಾಕ್ಷಿಯಾಗುವಂತೆ ಪ್ರಯತ್ನಮಾಡುವೆನು! ಮುಂದೆ ಏನಾದರಾಗಲಿ, ವಿಧಿ ಲಿಖಿತವಿದ್ದಂತೆ! . . .

[ಪರದೆ ಬೀಳುವದು.]

# ಅಂಕ ಐದು

## ದೃಶ್ಯ ೧

(ರಾತ್ರಿಯ ಸಮಯ. ತಿಂಗಳಬೆಳಕು ನಸುಮಬ್ಬಾಗಿದೆ. ಬಿದನೂರಿನ ಹೊರಬೀದಿಯೊಂದರಲ್ಲಿ ಚಿಂದಿಬಟ್ಟೆಗಳನುಟ್ಟು ತಲೆಕೂದಲು ಕೆದರಿಕೊಂಡು ವಿಕಾರವೇಷದಿಂದ ರುದ್ರಾಂಬೆ ಬರುತ್ತಾಳೆ. ಆಕೆಯ ಕ್ರೋಧ ವಿಸ್ಫಾರಿತ ನೇತ್ರಗಳು ರಕ್ತಾಕ್ತವಾಗಿ ರಕ್ತತೃಷ್ಣಾಪೂರ್ಣವಾಗಿ ಭೀಷಣವಾಗಿವೆ. ಆಕೆಯ ಹೃದಯದಲ್ಲಿ ಕ್ರೋಧದುಃಖಗಳ ಖಿಡ್ಗಾಖಿಡ್ಗಿಯಾಗುತ್ತಿದೆ. ನಡುನಡುವೆ ನೀಳವಾಗಿ ಬಿಳಲುಬಿದ್ದ ರೂಕ್ಷ ಕೇಶಪಾಶಗಳನ್ನು ಎರಡು ಕೈಗಳಿಂದಲೂ ಹರಿದುಕೊಳ್ಳುತ್ತಾಳೆ. ಒಮ್ಮೆಯೊಮ್ಮೆ ತಲೆಬಡಿದುಕೊಳ್ಳುತ್ತಾಳೆ. ಕೆಲವು ಸಾರಿ ತಲೆ ಮೈಗಳ ಮೇಲೆ ದೂಳು ಹಾಕಿಕೊಳ್ಳುತ್ತಾಳೆ.)

ರುದ್ರಾಂಬೆ (ಅನಿಮಿಷನಯನೆಯಾಗಿ ಗಗನದೆಡೆಗೆ ನೋಡುತ್ತ ಬದ್ಧಭ್ರುಕುಟಿಯಾಗಿ ದೀರ್ಘಶ್ವಾಸಗಳನ್ನು ಬಿಡುತ್ತ)—

ಇನ್ನೂ ಮಿಣುಕುತಿವೆ! ಇನ್ನೂ ಮಿಣುಕುತಿವೆ
ಈ ಹಾಳು ನಿಷ್ಕರುಣ ತಾರೆಗಳು! ಹಾಳಾಗಲಿ!
ನಿಮ್ಮ ಕಾಂತಿಯ ಕಣ್ಣು ಸಿಡಿದೊಡೆದು ಹೋಗಲಿ
ನನ್ನ ಬಾಳಿನ ನೆಚ್ಚು ಹುಟ್ಟಳಿದುಹೋದಂತೆ!
(ತಲೆಕೂದಲು ಹರಿದುಕೊಳ್ಳುವಳು.)
ಗಗನ ಶ್ಮಶಾನದಲಿ ಪ್ರಜ್ವಲಿಪ ಚಿತೆಯೇ,
ಓ ಚಂದ್ರ,
ನಿನ್ನ ಪ್ರೇತ ಜ್ಯೋತಿಯನ್ನೇಕೆ ಚೀರುತಿಹೆ?
ಸಾಕು ಸಾಕೀ ನಿನ್ನ ರುದ್ರ ಪರಿಹಾಸಂ! (ಔಡುಗಚ್ಚಿ)
ಅಯ್ಯೋ ನಿನ್ನನು ಕೊಲೆಗೈಯಲಾರಿಲ್ಲವೇ
ಅಲ್ಲಿ, ಆ ಬಾನಿನ ಸತ್ತ ಸುಡುಗಾಡಿನಲ್ಲಿ?
ಓ ತಾರೆಯೇ ನುಗ್ಗು, ನಡೆ, ಹೋಗು;
ಚಂದ್ರನಿಗೆ ತಾಗು,
ನೀವಿಬ್ಬರೂ ಒಡೆದು ಚೂರಾಗಿ ಬೀಳುವಿರಿ.
ಅದ ನೋಡಿ ತಣಿಯುವೆನು!—
ಓ ಶೂನ್ಯವೇ,
ನನ್ನೆದೆಯನಾವರಿಸಿದಂತೆ ವಿಶ್ವವನೇಕೆ

ನುಂಗಿ ನುಣ್ಣನೆ ನೊಣೆದು ತೇಗದಿಹೆ ?—

(ತಲೆಯ ಮೇಲೆ ಮಣ್ಣೆರಚಿಕೊಂಡು ಎದೆಬಡಿದು ಕಲಿಹೊಡೆದುಕೊಳ್ಳುತ್ತಾಳೆ.)

ಓ ಪರ್ವತಾರಣ್ಯಗಳೇ ಬನ್ನಿ,
ಓ ಗಗನ ಸಾಗರಗಳೇ ಬನ್ನಿ,
ಓ ಸೂರ್ಯ ಚಂದ್ರ ತಾರೆಗಳೆ ಬನ್ನಿ,
ಓ ಬ್ರಹ್ಮಾಂಡವೇ ಬಾ,
ಓ ಕಾಲದೇಶಗಳೇ ಬನ್ನಿ
ನನ್ನೆದೆಯ ಶೂನ್ಯವನು ತುಂಬಿ, ಬನ್ನಿ !—
ಇಲ್ಲ, ಆ ಶೂನ್ಯವನು ತುಂಬಲಾರಿರಿ ನೀವು !
ಆ ಶೂನ್ಯದಲಿ ಏಲಯವಿದೆ!
ನೀವಲ್ಲಿ ಜೀರ್ಣವಾಗುವಿರಿ !
ನೀವೆಲ್ಲ ಇಲ್ಲವಾಗುವಿರಿ !

(ಸಂಪೂರ್ಣ ಹತಾಶಳಾಗಿ ಕೆಳಗುರುಳಿ ಮತ್ತೆ ನೊಳಕಾಲೂರಿ ಮೇಲೆ ನೋಡಿ)

ಹೇ ಜಗದೀಶ್ವರನೇ, ಹೇ ಜಗದೀಶ್ವರನೇ,
ಶೂನ್ಯವನು ಪೂರ್ಣಗೈಯುವ ಶೂನ್ಯತಮ ಶೂನ್ಯವೇ,
ನೀನೆನಗೆ ಸಾಕ್ಷಿ ! ನೀನೆನಗೆ ಸಾಕ್ಷಿ !
ಹೊನ್ನಯ್ಯನೆನ್ನಿಯನನು ಕೊಲೆಗೈದುದಕೆ—ಅಯ್ಯೋ—
ನೀನೆನಗೆ ಸಾಕ್ಷಿ !—
ಓ ರಾತ್ರಿ ! ಓ ಕಾಳರಾತ್ರಿ !
ನೀನೂ ನನಗೆ ಸಾಕ್ಷಿ !
ನಾನು ಅನಾಥೆ! ನಾನು ದುಃಖಿತೆ!
ಓ ಆಕಾಶ! ಓ ನಕ್ಷತ್ರ!
ನೀವೆಲ್ಲರೂ ನನಗೆ ಸಾಕ್ಷಿ ! (ದುಃಖಭರದಿಂದ)
ಅಯ್ಯೋ—(ರೋದಿಸಿ ಗೋಳಾಡಿ)
ನನ್ನೆದೆಯುಸಿರಿದುದಕೆ ನೀವೆಲ್ಲರೂ ಸಾಕ್ಷಿ !—
(ಮುಖ ಭಯಂಕರವಾಗಿ ಫಕ್ಕನೆ ಮೇಲೆದ್ದು ಹಲ್ಲು ಕಚ್ಚುತ್ತ)
ಎಲವೋ ಪಾಪಿ! (ಪ್ಲುತಸ್ವರದಿಂದ)
ಪಿಶಾಚಿ! ಘಾತುಕಾ! ಪಾತಕಿ! ನೀಚ!
ಹೊನ್ನಯ್ಯ !—(ಚೀರುವಳು)
ನಿನಗೆ ಕೈಬಂದುದೇ, ನಿನಗೆ ಮನಬಂದುದೇ

ನನ್ನ ಕಣ್ಣಾಗಿದ್ದ ನನ್ನಿನಿಯನನ್ನಿರಿಯೆ ?—
ಅದಕಿದೋ—ಅದಕಿದೋ !

(ಸೊಂಟದಿಂದ ಕಠಾರಿಯನ್ನು ಹೊರಗೆಳೆದು)

ಅದಕಿದೇ ನಿನಗೆ ಸಾಕ್ಷಿ ! (ವಿಕಟವಾಗಿ ನಕ್ಕು)—

(ಇದ್ದಕ್ಕಿದ್ದಂತೆ ಶರೀರದ ಕಾಠಿನ್ಯ ಕೋಮಲವಾಗಿ ಹೃದಯವಿದ್ರಾವಕವಾದ ವಾಣಿಯಿಂದ ಹೇಳುತ್ತ ತತ್ತರಿಸಿ ನೆಲದಮೇಲೆ ಕೂತು ರೋದಿಸುತ್ತಾಳೆ.)

ಓ ಇನಿಯ,—ಓ ದೊರೆಯೇ,—
ಓ ನನ್ನ ಬಸವಯ್ಯ,
ನಿನ್ನ ಗತಿಯಿಂತಾಯ್ತೆ ?
ಅಯ್ಯೊ ನನ್ನ ನೊಲಿದುದಕೆ ! (ಕಡುದುಬಿದ್ದು ರೋದಿಸಿ)

(ಮತ್ತೆ ಮೇಲೆದ್ದು ದೃಢತೆಯಿಂದ)

ಮೃತ್ಯೂ ! ಓ ಮೃತ್ಯೂ ! (ಎದೆಯನ್ನು ಮುಟ್ಟುತ್ತ)
ಈ ಶೂನ್ಯವನು ತುಂಬಲಾರೆಯಾ ನೀನು ?
ಹಾಗಾದರಿದೋ ! ಬಾ ! ತುಂಬು !

(ಕಠಾರಿಯನ್ನೆತ್ತಿ ಯಾರನ್ನೋ ತಿವಿಯುವಂತೆ ಅಭಿನಯಿಸಿ)

ತಂದೆಯೇ, ನನ್ನಿನಿಯನನ್ನಗಲಿ ನೀನೂ
ಓಡಿದೆಯಾ ? (ಅಳುವಳು.)—ಓ ಶಿವಯ್ಯ,
ಹಂಬೇಡಿಯೇ, ಪುತ್ರದ್ರೋಹಿ,
ಹೊನ್ನಯ್ಯನನು ತಿವಿದು ಕೆಡಹಿ ಕೊಲಲಾರದೇ
ತಲೆಮರಸಿಕೊಂಡು ಓಡಿದೆಯಾ ?—
ಇರಲಿ ! ಇರಲಿ !—
ಅದನಿಂದು ಪೂರೈಸುವೆನು ನಾನು !
ನಾನು !
ರುದ್ರಾಂಬೆಯಲ್ಲದಿಹ ರಕ್ತಾಕ್ಷಿ ನಾನು !—
ಹೊನ್ನಯ್ಯ, ಕೊಂದು ಹೆಣವನು ತಂದು ಮಸಣದಲಿ
ಸಂಸ್ಕಾರವೆಸಗುವಂತೆ ಅಭಿನಯಿಸುತಿಹೆಯಾ ?
ಆ ಮಸಣದಿಂದ ನೀ ಮರಳಲಾರೆ !—
ನಾನು ರಕ್ತಾಕ್ಷಿ ಅಹುದಾದರೆ
ನೀ ಮರಳಲಾರೆ !—

ನಿನ್ನ ರಕ್ತವ ಚೆಲ್ಲಿ
ತಣಿಸುವೆನು ನನ್ನಿನಿಯನಾತ್ಮವನು!—
ಓ ಕಾಳರಾತ್ರಿ,
ಬಾ ನನ್ನೊಡನೆ!
ಮಿತ್ರದ್ರೋಹಿಯ ಕೊಲೆಗೆ!—
ಹೊನ್ನಯ್ಯನ ಕೊಲೆಗೆ—
ನರಬಲಿಗೆ!—ಶ್ಮಶಾನ ಬಲಿಗೆ!—

(ಮೆಲ್ಲಗೆ ಕಠಾರಿಯನ್ನು ನೋಡುತ್ತ ತತ್ತರಿಸುತ್ತ ಹೋಗುತ್ತಾಳೆ.)

[ಪರದೆ ಬೀಳುವುದು.]

## ದೃಶ್ಯ ೨

(ನಡುರಾತ್ರಿ ಮೀರಿದೆ. ಬಿದನೂರಿನ ಹೊರಬಯಲು ಮಸಣದಲ್ಲಿ ಬಸವಯ್ಯನ ಸಮಾಧಿ. ಕೆಂಚಣ್ಣ ಪಂಜು ಹಿಡಿದುಕೊಂಡು ನಿಂತಿದ್ದಾನೆ. ತಿಮ್ಮಜಟ್ಟಿ ಗುದ್ದಲಿಯಿಂದ ಸಮಾಧಿಗೆ ಮಣ್ಣು ತುಂಬುತ್ತಿದ್ದಾನೆ. ಹೊನ್ನಯ್ಯನು ಬಳಿಯಲ್ಲಿಯೆ ಕುಳಿತು ತಲೆಯಮೇಲೆ ಕೈಯಿಟ್ಟು ಶೋಕಪಡುತ್ತಿದ್ದಾನೆ.)

ಹೊನ್ನಯ್ಯ—ಓ ಸ್ವರ್ಣಸ್ವಪ್ನವೇ, ಸಿಡಿದೊಡೆದು ಹೋದೆಯಾ?
ಮೂಡಣದ ಬಾನ ಕರೆಯಲಿ ಉಷೆಯ ತಣ್ಬೆಳಕು
ಮುಗುಳುನಗೆಯನು ಬೀರಿಬಹ ಮೊದಲೆ, ಬನಗಳಲಿ
ಉದಯಕಾಲದ ಮೌನವಾರಿಧಿ ವಿಹಂಗಗಳ
ಮಧುರ ಕೂಜನ ತರಂಗಾಳಿಯಿಂದಲ್ಲೋಲ
ಕಲ್ಲೋಲವಾಗಿ ಎಚ್ಚರುವ ಮುನ್ನವೆ, ನಟ್ಟ
ನಡುರಾತ್ರಿಯೊಳೆ ಬಟ್ಟಬಯಲಾಗಿ ಹೋದೆಯಾ?
ಓ ರತ್ನಹಾರವೇ, ಸುಂದರಿಯ ಕಂಠದಲ
ನಲಿದಾಡಲೆಂದು ಬಂದಾ ನೀನು ಕಾಡಿನಲಿ
ಸೂಕರನ ಪದಹತಿಗೆ ಸಿಕ್ಕಿ ಚೂರಾದೆಯಾ?
ಅರಮನೆಯ ಉದ್ಯಾನದಲಿ ಬೆಳೆದ ಶ್ರೀತರುವೆ,
ಚೈತ್ರದಾಗಮನದೊಳೆ ಬಿರುಗಾಳಿಗಿಳೆಗುರುಳಿ
ಹಾಳೊರಲೆಗುಣಿಸಾಗಿ ಕಣ್ಮರೆಯಾದೆಯಾ?
ಓ ಮಿತ್ರ, ಓ ನನ್ನ ಬಸವಯ್ಯ, ರಾಜನಿಗೆ
ಮಗನಾಗಿ ಜನಿಸಿ ಪರದೇಶಿಯಂದದಲಿ
ಮಣ್ಣಾದುದೇ ನಿನ್ನ ಸಿರಿಬಾಳು!—ಎಲೆ ಬದುಕೆ,

ತುತ್ತತುದಿಯಲಿ ನೀನು ಬರಿಯೊಂದು ಹಿಡಿಮಣ್ಣು !—
ನಿನ್ನನುಳುಹಲು ನಾನು ಕೈಕೊಂಡ ಸಾಹಸವೆ
ನಿನಗೆ ಮಸಣದ ಮಾರ್ಗವಾದುದೈ, ಬಸವಯ್ಯ !
ಅಯ್ಯೊ, ಇನ್ನಾರೊಡನೆ ನನ್ನೆದೆಯ ವೇಧೆಯನು
ಹೇಳುವೆನು ? ಆರೊಡನೆ ಕಲೆಯ ಸಾಮ್ರಾಜ್ಯದಲಿ,
ತತ್ತ್ವದುದ್ಯಾನದಲಿ, ಚರಿಸಿ, ಭಾವಮಂಜರಿಯ
ತಿರಿದು ನಲಿಯುವೆನು ? ಮತ್ತಾರೊಡನೆ ರವಿಯುದಯ
ಶಶಿಯುದಯಗಳನು ಮೈಗುಡಿಗಟ್ಟಿ ಬಣ್ಣಿಸಲಿ ?
ಸೋದರನೆ, ನೀನೆನಗೆ ಎದೆಯ ಕಣ್ಣಾಗಿದ್ದೆ ;
ಬಾಳಿನುಸಿರಾಗಿದ್ದೆ ! ನಿನ್ನನುಳಿದೆನಗಿಂದು
ಕಣ್ಣಿಲ್ಲ; ಎದೆಯಿಲ್ಲ; ಉಸಿರಿಲ್ಲ ! ನಾನಿಂದು
ಹುಟ್ಟುಗುರುಡನು ; ಬಾಳು ನನಗಿನ್ನು ಕಗ್ಗತ್ತಲೆ !
ನಿನ್ನನೊಳಕೊಂಡಿರುವ ಮರಣಾಂಧಕಾರವೇ
ನನಗೆ ಜ್ಯೋತಿಯ ಪುಂಜವಾಗಿಹುದಿಂದು !—
ನಿಷ್ಕರುಣ ಲೋಕವೇ,
ನಿನಗೆ ದಯೆ ದಾಕ್ಷಿಣ್ಯವೊಂದಿಲ್ಲ !
ಆರಳಿದರೇನಂತೆ ನೀನುರುಳುತಿರುವೆ !
ನಾನಳಿದರೇನಂತೆ ? ನೀನಳಿದರೇನಂತೆ ?
ಇರುಳು ಕಳೆವುದು ! ನೇಸರೆಂದಿನಂತೆಯೆ ಮೂಡಿ
ಹೊನ್ನೀರಿನಿಂದಿಳೆಯ ಮೀಯಿಸುತೆ ಬೆಳಗುವನು !
ಗಾಳಿ ಬೀಸುವುದೆಂದಿನಂತೆ ! ಹರಿಯುವುದು ಹೊಳೆ
ಹಿಂದೆ ಹರಿದಂದದೊಳೆ ! ಮಾಯೆಯಿಕ್ಕುವ ಕರದ
ತಾಳಲಯಕೆಂದಿನಂತೆಯೆ ಕಾಲದೇಶಗಳು
ನರ್ತಿಸುತೆ ಸಾಗುವುವು !—ಅಯ್ಯೋ, ಮಾನವನ
ಎದೆಯೊಲ್ಮೆಯಿಂದುದಿಪ ಒಗೆಯು ನೆನಹಿಲ್ಲದಿರೆ
ತೀರಿದವರೆಲ್ಲರೂ ಶೂನ್ಯಕಾಪೋಶನಂ !—(ಚಿಂತಿಸುವನು.)
ಹಿಂದೆಲ್ಲ ಬಾಳುತಿಹುದಿಂದಿನ ನೆನಹಿನಲ್ಲಿ ;
ಮುಂದೆಲ್ಲ ಬದುಕಿರುವುದಿಂದಿನಾಕಾಂಕ್ಷೆಯಲಿ !

(ಅಷ್ಟರಲ್ಲಿ ತಿಮ್ಮ ಜಟ್ಟ ಕೆಂಚಣ್ಣರು ಕೆಲಸವನ್ನೆಲ್ಲ ಪೂರೈಸಿ ನಿಂತು)

**ಕೆಂಚಣ್ಣ**—ಸ್ವಾಮಿ, ನಡುರಾತ್ರಿ ಮೀರಿಹೋಯಿತು.

ತಿಮ್ಮಜಟ್ಟಿ—ನಾವಿನ್ನು ತಡಮಾಡಿದರೆ ಕೇಡಾಗಬಹುದು. ನಿಂಬಯ್ಯ ಸಂಶಯದ ಪಿಶಾಚಿ !

ಹೊನ್ನಯ್ಯ (ಅನ್ಯಮನಸ್ಕನಾಗಿ)— ರುದ್ರಾಂಬೆ !—
ರುದ್ರಾಂಬೆ, ನೀನೆಲ್ಲಿ ಮರೆಯಾದೆಯೇ, ತಂಗಿ ?—
ಕೆಂಚಣ್ಣ, ರುದ್ರಾಂಬೆಯಿಹ ನೆಲೆ ನಿನಗೆ ಗೊತ್ತೆ ?

ಕೆಂಚಣ್ಣ—ನಾನರಿಯೆ, ಸ್ವಾಮಿ. ತಾಯಿಗಿದು ತಿಳಿಯದಿರುವುದೆ ಲೇಸು.

ತಿಮ್ಮಜಟ್ಟಿ—ನೀವೂ ಶಿವಯ್ಯನೂ ರಾತ್ರಿ ಸೆರೆಮನೆಯಿಂದ ಅವರನ್ನು ಬಿಡಿಸಿಕೊಂಡು ಹೋದ ಮರುದಿನವೇ ತಾಯಿ ವೇಷ ಮರಸಿಕೊಂಡು ಅದೃಶ್ಯವಾದರಂತೆ. ಹಾಗೆ ಮಾಡದಿದ್ದರೆ ಅವರಿಗೆ ಏನು ಗತಿಯಾಗುತಿತ್ತೊ ತಿಳಿಯದು. ನಿಂಬಯ್ಯ ಕೋಪದಿಂದುರಿಯುತಿದ್ದನಂತೆ.

ಹೊನ್ನಯ್ಯ—ಜಟ್ಟಿ, ನಾವೀಗ ಹುಟ್ಟಿಸಿರುವೀ ಸುದ್ದಿ
ರುದ್ರಾಂಬೆಗೆಲ್ಲಿಯಾದರೂ ಮುಟ್ಟಿದರೆ, ನಾನೆ
ಬಸವಯ್ಯನನು ಕೊಂದೆನೆಂಬ ಹುಸಿಯನು ನಂಬಿ
ಆತ್ಮಹತ್ಯವ ಮಾಡಿಕೊಂಬಳೋ ಏನೋ ?
ನನಗೆ ಭಯವಾಗುತಿದೆ. ಹೇಗಾದರೂ ಮಾಡಿ
ಆಕೆಯನು ಹುಡುಕಿ ದಿಟವನು ತಿಳಿಸಬೇಕು.

ಕೆಂಚಣ್ಣ—ಎಲ್ಲಿಯಾದರೂ ಉಂಟೆ ? ಬಸವಯ್ಯನನು ಕೊಂದೆನು ಎಂದು ನೀವೇ ಹೇಳಿದರೂ ಅವರೆಂದಿಗೂ ನಂಬರು. ಕಿವಿಮೂಗಿಲ್ಲದ ಸುದ್ದಿಯನು ಕೇಳಿ ನಂಬುತ್ತಾರೆಯೆ ?

ತಿಮ್ಮಜಟ್ಟಿ—ನಿನ್ನೆ ನೀವು ಹೇಳಿದ ಮೊದಲ್ಗೊಂಡು ನಾನೇ ನಿಮ್ಮ ಮಾತನ್ನು ನಂಬಲಿಲ್ಲ. ಯಾರೋ ಹೇಳುವ ಸುದ್ದಿಯನ್ನು ಕೇಳಿ ನಿಮ್ಮನ್ನು ಕೊಲೆಗಾರನೆನ್ನುವರೇ ?

ಹೊನ್ನಯ್ಯ—ನೀವರಿಯಲಾರಿರಿ ! ಕಷ್ಟದಲ್ಲಿರುವಾಗ
ಎಂಥವರಿಗಾದರೂ ಬಗೆ ಕದಡುವುದು ಸಹಜ.
ಗಾಯಗೊಂಡ ಜೀವಿಗೆ ಕಣ್ಣೆ ಕಾಲಲ್ಲವೇ ?

ಕೆಂಚಣ್ಣ (ಬೆಚ್ಚಿ)—ಅಲ್ಲಿ ನೋಡಿ ! ಅಲ್ಲಿ ನೋಡಿ !

ತಿಮ್ಮಜಟ್ಟಿ (ನೋಡಿ ಅಂಜಿ)—ಅಯ್ಯೊ ಮಸಣದ ಮಾರಿ !

ಕೆಂಚಣ್ಣ—ಏಳಿ ! ಹೊನ್ನಯ್ಯ, ಏಳಿ ! ಓಡಿಬನ್ನಿ ! ಬನ್ನಿ !

(ಪಂಜಿನೊಡನೆ ಓಡುತ್ತಾನೆ.)

ತಿಮ್ಮಜಟ್ಟಿ—ಶಿವ ! ಶಿವ ! ಶಿವ !—ಬನ್ನಿ ! ಬನ್ನಿ ! ಬನ್ನಿ !

(ಗುದ್ದಲಿಯನು ಬಿಸುಟು ಓಡುತ್ತಾನೆ.)

ಹೊನ್ನಯ್ಯ (ನಿದಾನವಾಗಿ ಎದ್ದು ನೋಡಿ)—

ಏನದು ವಿಕಾರಾಕೃತಿ! (ಕಣ್ಣರಳಿಸಿ ಭಯ ವಿಸ್ಮಯದಿಂದ ನೋಡುತ್ತಾನೆ. ರುದ್ರಾಂಬೆ ಭರದಿಂದ ಪ್ರವೇಶಿಸುತ್ತಾಳೆ.) ನೀನಾರು? ಇಲ್ಲಿಗೇತಕೆ ಬಂದೆ? (ರುದ್ರಾಂಬೆ ವಿಕಟ ಕರ್ಕಶವಾಗಿ ನಗುತ್ತಾಳೆ.) ನಗುವೆ ಏಕಿಂತು? (ಎರಡು ಹೆಜ್ಜೆ ಹಿಂಜರಿಯೆ)

ರುದ್ರಾಂಬೆ (ತಾರಸ್ವರದಿಂದ)—ನಿಲ್ಲು! ಹಿಂಜರಿದು ಓಡದಿರು! ಓ ಹೇಡಿ!—
ನಾನಾರು ಎಂಬೆಯೋ?— ನಾನು ರಕ್ತಾಕ್ಷಿ! ಇಲ್ಲಿಗೇತಕೆ ಬಂದೆ
ಎಂಬೆಯೋ?—ಇದಕೆ!—

(ಸೊಂಟದಿಂದ ತಕ್ಕನೆ ಕಠಾರಿಯನ್ನೆಳೆದು ಹಾರಿಹೋಗಿ ಇರಿಯುತ್ತಾಳೆ. ಹೊನ್ನಯ್ಯ "ಹಾ" ಎಂದು ಮೂರ್ಛೆ ಬೀಳುತ್ತಾನೆ.)

ಪಾಪೀ, ನಿನಗಿದೇ ತಕ್ಕ ಪ್ರಾಯಶ್ಚಿತ್ತ!—
ತಣಿ, ತಣಿ, ಓ ಎನ್ನಿನಿಯ!
ನಿನ್ನನಿರಿದವನ ಬಿಸುನೆತ್ತರಲಿ ನಾದಿಹೆಸು
ನಿನ್ನೀ ಸಮಾಧಿಯಸು!

(ಹೊನ್ನಯ್ಯನನ್ನು ನೋಡುತ್ತ ನಿಲ್ಲುವಳು. ಅವನು ಮೂರ್ಛೆ ತಿಳಿದು, ನರಳಿ ಕನಸಿನಲ್ಲಿಂಬಂತೆ ಹೇಳುತ್ತಾನೆ.)

ಹೊನ್ನಯ್ಯ—ಬಸವಯ್ಯ! ಬಸವಯ್ಯ! ಅಯ್ಯೋ,
ನೀನು ಸಾಯುವ ವೇಳೆ ನನಗಿತ್ತ ಆಜ್ಞೆಯನು
ಕೈಗೂಡಿಸದೆ ಸಾಯುವಂತಾಯ್ತೆ?— ಆ ಪಾಪಿ,
ನಿನ್ನ ನನ್ಯಾಯದಿಂದಳಿಪಿದಾ ಪಾಪಿ
ಶಿವಯ್ಯನನು ಕೊಲ್ಲದೆಯೆ ಸಾಯುವಂತಾಯ್ತೆ?—
ಅಯ್ಯೋ ರುದ್ರಾಂಬೆ, (ರುದ್ರಾಂಬೆ ಬೆಚ್ಚಿ ನಿಲ್ಲುತ್ತಾಳೆ.)
ನಿನಗೆ ಸನ್ನಿಯನೊರೆವ
ಮುನ್ನ ಮೆಯೆ—ಕಂಡು ನಿನ್ನನು ನುಡಿವ ಮುನ್ನವೇ,—
ನಿನ್ನಿನಿಯನಾಡಿದಾ ಸಂದೇಶವನು ಒರೆವ
ಮುನ್ನವೇ,—ನಿಂಬಯ್ಯ ಚೆಲುವಾಂಬೆಯರ ಕುಹಕ-
ಪಟ್ಟಿರುವ ಕೊಲೆಗಾರನಿಂದಳಿಯುವಂತಾಯ್ತೆ?
ನಿಂಬಯ್ಯ! ಚೆಲುವಾಂಬೆ! ಓ ಪಾಪಿಗಳಿರಾ—(ನರಳುತ್ತಾನೆ)

ರುದ್ರಾಂಬೆ (ಮೆಲ್ಲಗೆ)—ಏನಿದು? ಈ ಮಾತುಗಳೆದೆಯಿರಿಯುವಂತಿವೆ!—(ಗಟ್ಟಿಯಾಗಿ) ನೀನು ಬಸವಯ್ಯನನು ಕೊಲಲಿಲ್ಲವೆ?

**ಹೊನ್ನಯ್ಯ** (ರುದ್ರಾಂಬೆಗೆ)—ಕೆಲಸಾರು, ಕೊಲೆಗಾರ ಹೊಲೆಯ!—(ತನ್ನಲ್ಲಿ ಗಟ್ಟಿಯಾಗಿ) ಓ ತಂಗಿ, ರುದ್ರಾಂಬೆ,
ನಿನಗಾದರೂ ದಿಟವನರುಹಿ ಸಾಯುತಿದ್ದೆ!
ನೀನೂ ಕಣ್ಮರೆಯಾದೆಯಾ?—

**ರುದ್ರಾಂಬೆ** (ಉದ್ವೇಗದಿಂದ)—ಹೇಳು ನನ್ನೊಡನೆ!
ನಾನು ರುದ್ರಾಂಬೆಗೊರೆಯುವೆನು!

**ಹೊನ್ನಯ್ಯ** (ಮೈತಿಳಿದು)—ಇದಾರ ವಾಣಿ? (ನೋಡಿ)
ನೀನು ಕೊಲೆಗೈದರೂ ನನಗೆ ಹಿತನಂತಿರುವೆ?
ರುದ್ರಾಂಬೆ ಎಲ್ಲಿಹಳು?—
ಹೇಳು; ಕೊಂದರೂ ಬದುಕಿಸುವೆ ನೀನೆನ್ನ?

**ರುದ್ರಾಂಬೆ**—ಇಲ್ಲಿಯೇ ಇಹಳು!

**ಹೊನ್ನಯ್ಯ**—ಅಯ್ಯೋ ಬೇಗ!—
ನಾನಳಿವ ಮುನ್ನವೇ ಕರೆದು ತಾ ತಂಗಿಯನು.

**ರುದ್ರಾಂಬೆ**—ನಾನು ರಕ್ತಾಕ್ಷಿಯಲ್ಲ! ನಾನೆ ರುದ್ರಾಂಬೆ!

**ಹೊನ್ನಯ್ಯ** (ಚೀರಿ)—ಓ ತಂಗಿ, ಓ ತಂಗಿ,
ಏನನೆಸಗಿದೆ? ಏನನೆಸಗಿದೆ! ನಾನಲ್ಲ;
ಬಸವಯ್ಯನನು ಕೊಂದವನು, ಶಿವಯ್ಯ!—
ಬಿಟ್ಟೋಡಿದರೆ ಪ್ರಾಣಸ್ನೇಹಿತನ ಶವಕೆ
ಸಂಸ್ಕಾರವಾಗನರು ಎಂದರಿತು—
ಹಗೆ ಹೊಲಬುಗೆಡುವಂತೆ ಹುಸಿಯ ಹುಟ್ಟಿಸಿದೆ!
ನಿನ್ನನರಸಿದರೆ ನೀ ದೊರಕಲಿಲ್ಲ;
ಅದರಿಂದ ನಾನೆ ಹೆಣವನು ತಂದು ಹೂಳಿದೆನು!

**ರುದ್ರಾಂಬೆ** (ಹೊನ್ನಯ್ಯನ ಮೇಲೆ ಕವಿದುಬಿದ್ದು)—
ಅಯ್ಯೋ ತಪ್ಪಿದೆನು! ತಪ್ಪಿದೆನು!
ಅಣ್ಣಾ, ಮೋಸವಾಯಿತು! ಮೋಸವಾಯಿತು?
ವಿಧಿಯೇ, ನಿನ್ನ ಣಕವಿದು ಸಾಕು! ಸಾಕು!
ನಾನೂ ಬರುತ್ತೇನೆ! ನನ್ನನೂ ಕರೆದುಕೋ!

(**ತಲೆ ಬಡಿದುಕೊಳ್ಳುತ್ತಾಳೆ.**)

**ಹೊನ್ನಯ್ಯ**—ಬೇಡ! ಬೇಡ! ಈಗಲೇ ಬೇಡ!
ನನ್ನ ಹೊರೆ ನಿನ್ನ ಬೆನ್ನಿನ ಮೇಲೆ ಬಿದ್ದಿದೆ;—
ಮುಯ್ಯಿ ತೀರಿಸದೆ ನೀನಳಿಯಲಾಗದು.

ಬಸವಯ್ಯನಭಿಲಾಷೆ, ಅದನು ಮಾಡಲೆ ಬೇಕು !
ಲಿಂಗಣ್ಣ ಮಂತ್ರಿಗಳು ಹೈದರಾಲಿಯ ಕೂಡಿ
ಈ ನಗರವನು ಮುತ್ತುವರು ನಾಳೆ. ನಿಂಬಯ್ಯ
ಚೆಲುವಾಂಬೆಯರು ತಪ್ಪಿಹೋಗದವೊಲೆಸಗು.
ನಿನ್ನಿನಿಯನನು ಕೊಂದಾ ಶಿವಯ್ಯನನು ಸಂಹರಿಸು !
ಬಸವಯ್ಯನಾಜ್ಞೆಯಿದು ! ಮಾಡಿ ಮಡಿ !—

ರುದ್ರಾಂಬೆ—ಅಣ್ಣಾ, ನಾನೆಂತಹ ಘೋರಕ್ಕೆ ಕೈಯಿಟ್ಟೆ !

(ಬಾಯಿ ಬಡಿದುಕೊಂಡು ತಲೆ ಹಂದುಕೊಳ್ಳುತ್ತಾಳೆ.)

ಹೊನ್ನಯ್ಯ—ದುಃಖಪಡದಿರು, ತಂಗಿ. ನಾನು ಸಂತೋಷದಲಿ
ಸಾಯುವೆನು. ನಿನ್ನ ಕಾಣದೆ ಮಡಿವೆನಲ್ಲಾ
ಎಂದು ಶೋಕಿಸುತಿದ್ದೆ !—ತುದಿಗೆಲ್ಲ ಸೊಗವಹುದು !
ತುದಿಗೆಲ್ಲ ಸೊಗವಹುದು ! ನನ್ನ ನುಡಿಯನು ನಂಬು !
ನೂರು ಜನ್ಮದ ಜೇವು ನೂರು ಜನ್ಮಕೆ ಬೆಲ್ಲ !
ನೂರು ನಿಟ್ಟುಸಿರುಗಳು ಸೇರಿದರೆ ಒಂದು ನಗೆ
ಹೊಮ್ಮುವುದು !—ನೆಚ್ಚಿರಲಿ !—ನೆಚ್ಚಿರಲಿ !—ನೆಚ್ಚಿರಲಿ !

(ಸಾಯುವನು.)

ರುದ್ರಾಂಬೆ (ಎದ್ದು ಮೊಳಕಾಲೂರಿ)—
ಕಾಳಕೂಟವ ಕುಡಿದ ಶಿವನೇ,
ಬಾ ನನ್ನೆದೆಯ ಹಾಲಾಹಲವನೀಂಟು !
ಮನ್ಮಥನ ಸುಟ್ಟ ಮುಕ್ಕಣ್ಣನೇ,
ಬಾ ನನ್ನೆದೆಯ ಕೋಮಲತೆಯನು ದಹಿಸು !
ಕಾಲದಂತ್ಯದಲಿ ಪ್ರಲಯಗೈವ ಮಹಾಭೈರವನೇ,
ಬಾ ನನ್ನೆದೆಯೊಳಿಂದು ಆವಿರ್ಭವಿಸು !
ಈ ಹೂವಿನೆದೆಯಲ್ಲಿ ಕಾರಮಿಂಚನು ಹೊಯ್ದು
ಬರಸಿಡಿಲನೂಡು ! (ಎದ್ದುನಿಂತು)
ನನ್ನಿನಿಯನಾಸೆಯನು ಕೈಗೂಡಿಸಲು ನನಗೆ
ಬಲ್ಮೆಯನು ನೀಡು ! ಕೃಪೆಮಾಡು !—
ಜನ್ಮಜನ್ಮಾಂತರದಿ ಬಸವಯ್ಯನೇ ನನಗೆ
ಇನಿಯನಾಗುವ ನಿನ್ನ ಸಿರಿಹರಕೆಯಿರಲಿ !
ಹೊನ್ನಯ್ಯನಣ್ಣನಾಗೈತರುವ ಹರಕೆಯಿರಲಿ !

ನನ್ನೊಡಲು ಸುಟ್ಟರೂ, ನಾನು ಕೆಟ್ಟರೂ
ನಿನ್ನ ಕೃಪೆಯಲಿ ನನಗೆ ನೆಚ್ಚುಗೆಡದಿರಲಿ!

(ಹಾಗೆ ಕಂಬನಿಸೂಸಿ ನಿಂತು ನಿಡುಸುಯ್ದು ತಕ್ಕನೆ ಏನನೊ ನಿರ್ಣಯಿಸಿದವಳಂತೆ ಕೆಳಗೆ ಬಿದ್ದ ಗುದ್ದಲಿಯನು ತುಡುಕಿ ಮುಚ್ಚಿದ್ದ ಸಮಾಧಿಯ ಮಣ್ಣನ್ನು ಅಗೆದು ತೆಗೆಯತೊಡಗುವಳು.)

[ಪರದೆ ಬೀಳುವುದು.]

## ದೃಶ್ಯ ೩

(ಬಿದನೂರಿನ ಅರಮನೆಯಲ್ಲಿ ಚೆಲುವಾಂಬೆ, ನಿಂಬಯ್ಯ, ಸೋಮಯ್ಯರು ಮಾತಾಡುತ್ತಿರುವರು.)

**ಚೆಲುವಾಂಬೆ**—ಸೋಮಯ್ಯ, ಖಿನ್ನನಾಗಿಹೆ ಏಕೆ? ಬೇಗ ನುಡಿ.
ಒಪ್ಪಲಿಲ್ಲವೆ ಹೈದರಾಲಿ?

**ಸೋಮಯ್ಯ**— ಇಲ್ಲವಂತೆ.
ನಾವಟ್ಟಿದಾ ದೂತನನೆ ಸೆರೆ ಹಿಡಿದರಂತೆ!

**ನಿಂಬಯ್ಯ**— ನಾಲ್ಕು ಲಕ್ಷಗಳಾತನಿಗೆ ಸಾಲದೆಯೆ ಹೋಯ್ತೆ?

**ಸೋಮಯ್ಯ**—ಎಲ್ಲ ಲಿಂಗಣ್ಣ ಮಂತ್ರಿಯ ಕಾರ್ಯ. ಬಿದನೂರು
ಸಂಸ್ಥಾನವನು ಹಾಳುಮಾಡಲೆಂದೇ ಅವನು
ಹುಟ್ಟಿದನು.

**ನಿಂಬಯ್ಯ**— ಇರಲಿ; ನೀನು ನಡೆ. ಸೇನೆಯನು
ಸಿದ್ಧಗೊಳಿಸಲು ಹೇಳು ರುದ್ರಯ್ಯಗೆ.
ಹಗೆಯು ಕೋಟೆಗೆ ನುಗ್ಗಿದೊಡನೆಯೇ ಅರಮನೆಗೆ
ಬೆಂಕಿಯಿಡುವಂತಾಳುಗಳಿಗಾಣತಿಯ ನೀಡು.
ರಾಣಿಯನು ನಾನೀಗಳೇ ಗುಪ್ತಮಾರ್ಗದಲಿ
ಹೊರಗೆ ಕೊಂಡೊಯ್ಯುವೆನು. ಈ ಪುರದೊಳೆಮ್ಮರಿಗೆ
ಬೂದಿಯೊಂದಲ್ಲದಿನ್ನೇನೂ ದೊರೆಯಬಾರದು!

(ಸೈನಿಕನೊಬ್ಬನು ವೇಗದಿಂದ ಬರುವನು.)

**ಚೆಲುವಾಂಬೆ**—ಏನು ಬಂದೆ? ಏನಾಯ್ತು!

**ಸೈನಿಕ**—ಶತ್ರುಗಳು ನಗರವನು ಮುತ್ತಿದರು! ನಗರದವರನೇಕರು ಲಿಂಗಣ್ಣ ಮಂತ್ರಿಗಳಿಗಾಗಲೇ ನೆರವಾಗುತ್ತಿದ್ದಾರೆ!

ನಿಂಬಯ್ಯ—ಇರಲಿ, ಸಡೆ; ನಾವೀಗಲೇ ಬರುತ್ತೇವೆ! (ಸೈನಿಕ ಹೋಗುವವನು.) ಸೋಮಯ್ಯ, ನೀನೂ ಹೋಗು! (ಸೋಮಯ್ಯ ತೆರಳುವನು.) ಪ್ರಿಯೆ, ನಿನಗೆ ಭಯವಾಗಿದೆಯೆ?

ಚೆಲುವಾಂಬೆ (ಸುಯ್ದು)—ಹೌದು, ನನಗೆ ಭಯವಾಗಿದೆ, ನಿಂಬಯ್ಯ!

ನಿಂಬಯ್ಯ— ಭಯವೇಕೆ? ಹೃದರನಿಗೆದುರಾಗಿ ಮಾರಾಂತು
　　ನಮ್ಮವರು ಗೆಲಲರಿಯರೆಂದೇ?

ಚೆಲುವಾಂಬೆ—　　　　ಅದಕಲ್ಲ! (ಚಿಂತಿಸುವಳು.)

ನಿಂಬಯ್ಯ— ಹೆದರದಿರು, ನಾನಿಹೆನು. ನಿನ್ನನೆಂತಾದರೂ
　　ದುರ್ಗದಿಂದಾಚೆಗೆ ಸುರಕ್ಷಿತವಾಗೊಯ್ದು
　　ಶತ್ರುಗಳ ಕೈಗೆ ಸಿಕ್ಕದ ತೆರದೊಳಿಟ್ಟು
　　ಮರಳುವೆನು ನಾ ರಣಾಂಗಣಕೆ—ನಾವೀಗ
　　ಇಲ್ಲಿಂದ ಬೇಗ ತೆರಳಲೆ ಬೇಕು. ಇಲ್ಲದಿರೆ
　　ನಮ್ಮಾಳುಗಳು ಕೋಟೆಗಿಡುವ ಬೆಂಕಿಗೆ ನಾವೆ
　　ಆಹುತಿಗಳಾಗುವೆವು. (ಗುಂಡುಗಳ ಸದ್ದು ಕೇಳಿಸುವುದು.)

ಚೆಲುವಾಂಬೆ (ಬೆಚ್ಚಿ)—ಗುಂಡುಗಳ ಸದ್ದು!

ನಿಂಬಯ್ಯ— ತಳುವಿದರೆ ತಪ್ಪಾಗುವುದು. ಬೇಗ ಹೊರಡೋಣ.
　　ನಿನ್ನ ವೇಷವ ಮರೆಸಿಕೋ. ಇಲ್ಲದಿರೆ ನಮಗೆ
　　ನಮ್ಮವರೆ ವಿಷವಾಗಿ ಬಿಡಬಹುದು. ನಾನೂ
　　ವೇಷ ಬದಲಾಯಿಸುವೆ. (ವೇಷ ಬದಲಾಯಿಸಿ)

ಚೆಲುವಾಂಬೆ—ಇದೇನಿದು ಗದ್ದಲ!

ನಿಂಬಯ್ಯ—ಶತ್ರುಗಳು ಲಗ್ಗೆ ಹತ್ತಿದರೆಂದು ತೋರುತ್ತದೆ! ಬಾ, ಬೇಗ, ಬಾ. (ಬಾಗಿಲಿಗೆ ಹೋಗಿ ತೆರೆಯಲೆಳಸಿ ಆಗದೆ) ಇದೇನು? ಬಾಗಿಲಿಗೆ ತಾಳ ಹಾಕಿದಂತಿದೆ!

ಚೆಲುವಾಂಬೆ—ಬಲವಾಗಿ ಎಳೆದುನೋಡು!

ನಿಂಬಯ್ಯ (ಎಳೆಯುತ್ತ)—ಬೀಗ ಹಾಕಿದ್ದಾರೆ!

ಚೆಲುವಾಂಬೆ—ಯಾರಲ್ಲಿ? ಹೊರಗೆ ನಗುತ್ತಾರೆ!

ನಿಂಬಯ್ಯ (ನೋಡಿ)—ಆ ಹುಚ್ಚಿ! ನಗುತ್ತಿದ್ದಾಳೆ!!

(ರುದ್ರಾಂಬೆ ಗವಾಕ್ಷದಲ್ಲಿ ಕಾಣಿಸಿಕೊಳ್ಳುವಳು.)

ಚೆಲುವಾಂಬೆ—ಹುಚ್ಚೀ, ಬಾಗಿಲು ತೆರೆ!

ರುದ್ರಾಂಬೆ (ಕಠೋರ ಶಾಂತಿಯಿಂದ)—ನಾನು ಹುಚ್ಚಿಯಲ್ಲ; ರಕ್ತಾಕ್ಷಿ!

ನಿಂಬಯ್ಯ—ರಕ್ತಾಕ್ಷಿ, ಬಾಗಿಲು ತೆರೆ. ಕೋಟೆಗೆ ಬೆಂಕಿ ಬೀಳುವುದು !

ರುದ್ರಾಂಬೆ—ಬೀಳಲಿ ! ಸಂತೋಷ !!

ನಿಂಬಯ್ಯ—ನಾವೆಲ್ಲ ಸಾಯುವೆವು !

ರುದ್ರಾಂಬೆ (ದೀರ್ಘ ವಾಣಿಯಿಂದ)—ಸಾಯಲಿ ! ಸಂತೋಷ !

ಚೆಲುವಾಂಬೆ—ಪಿಶಾಚಿ, ಬಾಗಿಲು ತೆರೆಯುತ್ತೀಯೊ ಇಲ್ಲವೊ ?

ರುದ್ರಾಂಬೆ—ಓ ಪರಮ ಪತಿವ್ರತೆ, ನಿನಗಿಂದು ಅಗ್ನಿ ಪರೀಕ್ಷೆ. (ನಿಂಬಯ್ಯ ಬಾಗಿಲಿಗೆ ಒದೆಯುವನು.) ನಿಂಬಯ್ಯ, ನೀನೆಷ್ಟು ಒದೆದರೂ ಪ್ರಯೋಜನವಿಲ್ಲ. ನಿನಗಿಂತಲೂ ಈ ಬಾಗಿಲು ಬಲವಾಗಿದೆ! (ಹಲ್ಲು ಕಡಿದು ಮೇಘ ಗಂಭೀರ ವಾಣಿಯಿಂದ) ಪುಣ್ಯಬಲವಿಲ್ಲದಿದ್ದರೂ ಪಾಪ ದೌರ್ಬಲ್ಯವಿಲ್ಲದ ಈ ಬಾಗಿಲು ನಿನಗಿಂತಲೂ ಬಲವಾಗಿಯೇ ಇದೆ.

ಚೆಲುವಾಂಬೆ—ಇದೇನಿದು ? ವ್ಯಂಗ್ಯಪರಿಹಾಸ್ಯ ! ನಿಂಬಯ್ಯ, ನನ್ನೆದೆ ನಡುಗುತ್ತಿದೆ !—ಓ ರಕ್ತಾಕ್ಷಿ, ನಿನಗೆ ಬೇಕಾದುದನು ಕೊಡುತ್ತೇವೆ. ಬಾಗಿಲು ತೆರೆ.

ರುದ್ರಾಂಬೆ (ಧೀರವಾಗಿ)—ನನಗೆ ಬೇಕಾದುದು ನಿಂಬಯ್ಯ ಚೆಲುವಾಂಬೆಯರ ಸಾವು!

ನಿಂಬಯ್ಯ—ಪಾಪೀ, ನಿನಗೇನು ಲಾಭ ನಮ್ಮನು ಕೊಂದು ?

ರುದ್ರಾಂಬೆ—ನೀನಾವ ಲಾಭವ ನೋಡಿ ದೊರೆ ಬಸವನಾಯಕರ ಕೊಂದೆ ? ಯಾವ ಲಾಭಕ್ಕಾಗಿ ಬಸವಯ್ಯ ಲಿಂಗಣ್ಣರನು ಸೆರೆಹಿಡಿದು ಕೊಲ್ಲಬೇಕೆಂದಿದ್ದೆ ?

ಚೆಲುವಾಂಬೆ—ನಿಂಬಯ್ಯ, ಇವಳು ನಿಜವಾದ ಹುಚ್ಚಿಯಲ್ಲ !

ರುದ್ರಾಂಬೆ (ವಿಕಟ ಹಾಸದಿಂದ)—ನಾನು ಹುಸಿ ಹುಚ್ಚಿಯಲ್ಲ ! ಹಸಿ ಹುಚ್ಚಿ, ರಕ್ತಾಕ್ಷಿ !—ನಾನು ಲಿಂಗಣ್ಣ ಮಂತ್ರಿಗಳ ಪುತ್ರಿ ರುದ್ರಾಂಬೆ! ನಿಮ್ಮ ದೆಸೆಯಿಂದ ಹತನಾದ ಬಸವಯ್ಯನ ಪ್ರೇಯಸಿ ! —ಸೋದಿರುಳಿನಲಿ ಮಸಣದಲಿ ಹೊನ್ನಯ್ಯನನು ತಪ್ಪು ತಿಳಿವಳಿಕೆಯಿಂದ ತಿವಿದು ಸಂಹರಿಸಿದ ಡಾಕಿನಿ !—ನಿಮ್ಮಿಬ್ಬರನೂ ಇಂದು ಈ ಅರಮನೆಯ ಬೆಂಕಿಯಲಿ ಬೇಳಲ್ಕೆ ತಂದಿರುವ ಯಜ್ಞದೀಕ್ಷಿತೆ !—ಏಕಿಂತು ಬೆರಗಾಗಿ ಸುಮ್ಮನೆ ನಿಂತಿರುವಿರಿ ? ಮುಂದುವರಿಯಲಿ ಪ್ರಣಯಕಾರ್ಯ !—ಇನ್ನು ತುಸ ಹೊತ್ತಿನಲ್ಲಿಯೆ—ಅದೋ, ಅಲ್ಲಿ ನೋಡಿ—ನಿಮ್ಮ ಪ್ರೇಮವಿಲಯಾಗ್ನಿ ತನ್ನ ಜ್ವಾಲಾಜಿಹ್ವೆಗಳಿಂದ ಅರಮನೆಯನು ನುಣ್ಣಗೆ ನುಂಗಿ ನೊಣೆಯುತ್ತಿದೆ! ನಾನು ಹೊರಡಲೆ? (ಚಲಿಸುವಳು.)

ಚೆಲುವಾಂಬೆ (ಅಳುತ್ತ)—ರುದ್ರಾಂಬೆ ! ಓ ರುದ್ರಾಂಬೆ ! ನಿಲ್ಲು ! ನಿಲ್ಲು !

ರುದ್ರಾಂಬೆ—ನಿಲ್ಲಲೀಗ ಸಮಯವಿಲ್ಲ.—ಬಹಳ ಕೆಲಸವಿದೆ ನನಗಿನ್ನು. ಶಿವಯ್ಯನೊಬ್ಬನಿದ್ದಾನೆ ! (ಹೋಗುವಳು.)

ನಿಂಬಯ್ಯ—ಹೊರಟೇ ಹೋದಳು !

**ಚೆಲುವಾಂಬೆ**—ಅಯ್ಯೋ ಇನ್ನೇನು ಗತಿ! (ಎವೆಯಿಕ್ಕದೆ ನೋಡಲಾರಂಭಿಸುವಳು.)

ನಿಂಬಯ್ಯ (ಹೊರಗೆ ನೋಡಿ)—ನಮಗಿನ್ನು ಸಾವೆ ಶರಣು!—ಏನಿದು ಚೆಲುವಾಂಬೆ? ಏನು ನೋಡುತ್ತಿರುವೆ? ಏಕೆ ಕಣ್ಣರಳಿ ನಿಂತಿರುವೆ? ಮಾತಾಡು! ಮಾತಾಡು! ಅದನಾದರೂ ಕೇಳುವೆನು!

ಚೆಲುವಾಂಬೆ (ಎಲ್ಲಿಯೋ ನೋಡುತ್ತ)—ಅಯ್ಯೋ ಮನ್ನಿಸಿ! ಮನ್ನಿಸಿ! ನಾನು ಮಹಾಪಾಪಿ! (ಮತ್ತೆ ಯಾರನ್ನೋ ನೋಡಿ) ಕಂದಾ, ಬಸವಯ್ಯ, ನನ್ನನ್ನು ಕಾಪಾಡುವಂತೆ ಮಾಡು!—(ಇನ್ನಾರನ್ನೊ ನೋಡಿದಂತೆ) ಹೊನ್ನಯ್ಯ, ಹೊನ್ನಯ್ಯ, ನಿನ್ನ ಕಾಲಿಗೆ ಬಿದ್ದೆ! ನನ್ನನ್ನು ಬಿಡಿಸು! ಬಿಡಿಸು!—(ಏಟು ಬಿದ್ದವಳಂತೆ ಕಡಿದುಕೊಂಡು ಬೀಳುತ್ತ)—ಅಯ್ಯೋ!!

ನಿಂಬಯ್ಯ (ಬಾಗಿ)—ಚೆಲುವಾಂಬೆ! ಚೆಲುವಾಂಬೆ!—ಓಡಿ ಬಾಗಿಲು ಒದೆದು, ಹತಾಶನಾಗಿ ನಿಂತು)

ಶತ್ರುಗಳೊಡನೆ ಹೊಡೆದಾಡಿ ಮಡಿವೆನು ಎಂದು
ಹಾರೈಸಿಕೊಂಡಿದ್ದೆ! ಆ ಬಯಕೆ ಬಯಲಾಯ್ತು!—
ಆದರೆ ಇದೂ ಲೇಸೆ!—(ಚೆಲುವಾಂಬೆಯನು ನೋಡಿ)
ಓ ಪ್ರಿಯೆ, ನಿನ್ನೊಡನೆ ನನಗೆ ಸಹಗಮನವಿದು.
ಎಳೆಯತನದಲಿ ನಿನ್ನ ನಾನೊಲಿದು ಬಯಸಿದ್ದೆ;
ನೀನೆನ್ನನೊಲಿದಿದ್ದೆ. ಆದರರಸನ ಕರುಬು
ನಮ್ಮನಗಲಿಸಿತು.—ನಮ್ಮೊಲ್ಮೆಯನ್ನಾದರೋ
ಕಾಲನೂ ಬೇರ್ಪಡಿಸಲಾರನ್! (ಹೊರಗೆ ನೋಡಿ)
ಬನ್ನಿ, ಬನ್ನಿ, ಓ ರುದ್ರ ಜ್ವಾಲೆಗಳೆ,
ನೀವಲ್ತೆ ನಮ್ಮ ಪ್ರೇಮಪ್ರತೀಕಗಳ್!

(ಮರಳಿ ಬಂದು ಚೆಲುವಾಂಬೆಯ ಬಳಿ ನಿಂತು ಯೋಚಿಸಿ ತನ್ನ ಖಡ್ಗವನು ಮೆಲ್ಲಗೆ ಹೊರಗೆಳೆಯುತ್ತಿರುವನು.)

[ಪರದೆ ಬೀಳುವುದು.]

## ದೃಶ್ಯ ೪

(ಬಿದನೂರಿನಲ್ಲಿ ಹೈದರನ ಬೀಡು. ಹೈದರಾಲಿ, ಲಿಂಗಣ್ಣ, ಮಹಮ್ಮದಾಲಿ, ಸಂನ್ಯಾಸಿ ಕುಳಿತಿದ್ದಾರೆ. ಲಿಂಗಣ್ಣನು ಖಿನ್ನ ಮುಖಮುದ್ರೆಯಿಂದ ಸಜಲನಯನನಾಗಿದ್ದಾನೆ.)

ಹೈದರಾಲಿ (ಸಂನ್ಯಾಸಿಗೆ)—ರಾಮರಾಯರೆ, ನಿಮ್ಮಿಂದ ಮಹದುಪಕಾರವಾಗಿದೆ. ಅಂತೂ ದುಷ್ಟ ಶಿಕ್ಷಣೆಯೇನೋ ಕೈಗೂಡಿದಂತಾಯಿತು. ಆದರೆ ದುರ್ದೈವ

ದಿಂದ ಶಿಷ್ಟ ರಕ್ಷಣೆಯಾಗಲಿಲ್ಲ. ಬಸವಯ್ಯನವರು ಕಾಲವಾದರು. ಅವರ ಮಿತ್ರನಾದ ಹೊನ್ನಯ್ಯನವರೂ ಶತ್ರುಗಳ ಕೃತ್ರಿಮಕ್ಕೆ ಸಿಕ್ಕಿ ಕೊಲೆಯಾದರಂತೆ! ಲಿಂಗಣ್ಣ ಮಂತ್ರಿಗಳೂ ಖಿನ್ನರಾಗಿದ್ದಾರೆ. ಅವರ ಕುಮಾರ್ತೆ ಎಲ್ಲಿದ್ದಾರೆ ಎಂಬುದೇನಾದರೂ ನಿಮಗೆ ತಿಳಿದುಬಂದಿದೆಯೆ?

ಸಂನ್ಯಾಸಿ—ಮಹಸ್ವಾಮಿ, ನನಗದು ತಿಳಿಯದು. ಲಿಂಗಣ್ಣನವರೂ ರಾಜಕುಮಾರ ಬಸವಯ್ಯನವರೂ ಸೆರೆಯಿಂದ ತಪ್ಪಿಸಿಕೊಂಡು ಹೋದ ಮರುಹಗಲೆ ಅವರು ವೇಷ ಮರೆಸಿಕೊಂಡು ಕಣ್ಮರೆಯಾದರೆಂದು ವದಂತಿಯಿತ್ತು.

ಮಹಮ್ಮದಾಲಿ (ಲಿಂಗಣ್ಣನಿಗೆ)—ಮಂತ್ರಿಗಳೆ, ಚಿಂತಿಸಬೇಡಿ. ತಮ್ಮ ಕುಮಾರ್ತೆ ಬದುಕಿದ್ದರೆ ಎಲ್ಲಿದ್ದರೂ ನಾನು ಹುಡುಕಿಸುತ್ತೇನೆ.—ಮೊದಲು ಸೆರೆ ಸಿಕ್ಕಿರುವ ಸೋಮಯ್ಯ, ಶಿವಯ್ಯ ಮೊದಲಾದವರಿಗೆ ಶಿಕ್ಷೆ ವಿಧಿಸುವ ಕಾರ್ಯವಾಗಲಿ.

ಹೈದರಾಲಿ—ಲಿಂಗಣ್ಣನವರೆ, ನಮ್ಮ ಬೇಹಿನವರಾದ ರಾಮರಾಯರು ಹೇಳಿದುದೆಲ್ಲವನ್ನೂ ಆಲಿಸಿರುವಿರಿ. ಅಪರಾಧಿಗಳಿಗೆ ಶಿಕ್ಷೆ ವಿಧಿಸುವ ಕಾರ್ಯಭಾಗ ನಿಮ್ಮದಾಗಿದೆ. ಅವರನ್ನೆಲ್ಲ ಕರೆಯಿಸಲೆ?

ಲಿಂಗಣ್ಣ (ದುಃಖದಿಂದ)—ದೊರೆಯೆ, ನನಗಾವುದೂ ಬೇಡವಾಗಿದೆ. ನನಗೆ ಮಂಕು ಕವಿದಂತಿದೆ. ಕಡೆಗೂ ನನ್ನ ಸಂಕಲ್ಪವೆಲ್ಲವೂ ನಿಷ್ಫಲವಾಯಿತು. ನಿಮ್ಮಿಷ್ಟ ಬಂದಂತೆ ಮಾಡಬಹುದು. (ಬಿಕ್ಕಿಬಿಕ್ಕಿ) ಬಸವಯ್ಯನನು ಬಿದನೂರು ಗದ್ದುಗೆಗೇರಿಸಿ ಆ ವೈಭವವನು ನೋಡಬೇಕೆಂದಿದ್ದೆ. ಆ ಹೊಂಗನಸು ಹುಡಿಯಾಯ್ತು. ಅದರೊಡನೆ ನನ್ನೊಬ್ಬಳೇ ಮುದ್ದುಗುವರಿಯ ಸಕಲ ಸೌಭಾಗ್ಯವೂ ಮಳೆ ಬಿಲ್ಲಿನಂತೆ ಕರಗಿ ಕಣ್ಮರೆಯಾಯ್ತು! (ದುಃಖಾತಿಶಯದಿಂದ) ನನಗೆ ಯಾರನೂ ಶಿಕ್ಷಿಸುವ ಚಲವಿಲ್ಲ. ಯಾರ ಮೇಲೆಯೂ ನನಗೆ ದ್ವೇಷವಿಲ್ಲ. ಎಲ್ಲರೂ ಸುಖವಾಗಿರಲಿ!—ಅಯ್ಯೋ ನನ್ನ ರುದ್ರಾಂಬೆ! ನನ್ನ ಮುದ್ದುಗುವರಿ ರುದ್ರಾಂಬೆ! ನನ್ನ ಮಗಳನೊಂದುಬಾರಿ ನೋಡುವ ಭಾಗ್ಯವೊದಗಿದರೆ ಸಾಕು! ಸಾಕು, ಈ ಬಾಳಿನಂಡಲೆ ಸಾಕು! ತಣ್ಣಗೆ ಕಣ್ಮುಚ್ಚಿ ನನ್ನ ಹಗೆಗಳೆಲ್ಲರಿಗೂ ಸೊಗವಿರಲಿ ಎಂದು ಎದೆಮುಟ್ಟಿ ಹರಕೆಗೈದು ಇಲ್ಲಿಂದ ಜಾರುವೆನು! ನಾನಿನ್ನು ಆಶೀರ್ವದಿಸಬಲ್ಲೆನೇ ಹೊರತು ಶಪಿಸಲರಿಯೆ! ಶಪಿಸಲರಿಯೆ!

(ಹೊರಗಡೆ ಬೊಬ್ಬೆಯಾಗುವುದು.)

ಸಂನ್ಯಾಸಿ—ಏನು ಬೊಬ್ಬೆಯದು? (ಸೈನಿಕನೊಬ್ಬನು ನುಗ್ಗುವನು.)

ಮಹಮ್ಮದಾಲಿ—ಏನದು ಗಲಭೆ!

ಸೈನಿಕ (ಉದ್ವೇಗದಿಂದ)—ಮಹಾಸ್ವಾಮಿ, ಶಿವಯ್ಯನನ್ನು ಸೆರೆಯಿಟ್ಟ ಬೀಡಿಗೆ ಯಾರೋ ಹುಚ್ಚಿಯೊಬ್ಬಳು ನುಗ್ಗಿ ಅವನನ್ನು, ಅವನನ್ನು ಕೊಲೆಮಾಡಿ—

ಲಿಂಗಣ್ಣ—ಏನು ! ಏನು !

ಸೈನಿಕ—ಅವನನ್ನು ಕೊಲೆಮಾಡಿ ತನ್ನನು ತಾನೇ ಕಠಾರಿಯಿಂದ ತಿವಿದುಕೊಂಡಳು! (ಲಿಂಗಣ್ಣ ಮರವಟ್ಟು ನಿಲ್ಲುವನು.)

ಸಂನ್ಯಾಸಿ (ಎದ್ದು)—ಇನ್ನೂ ಬದುಕಿದ್ದಾಳೆಯೆ ?

ಸೈನಿಕ—ಹೌದು ; ಏನೇನೊ ಹಲವರಿಯುತಿದ್ದಾಳೆ !

ಲಿಂಗಣ್ಣ (ಹತಾಶವಾಣಿಯಿಂದ)—ಬದುಕಿದ್ದಾಳೆಯೆ ?

ಸೈನಿಕ—ಲಿಂಗಣ್ಣ ಮಂತ್ರಿಗಳನ್ನು ಕರೆಯುವಂತೆ ಹೇಳಿದಳು.

ಲಿಂಗಣ್ಣ—ಅಯ್ಯೋ ! (ತತ್ತರಿಸುವನು. ಹೈದರಾಲಿಯೂ ಮಹಮ್ಮದಾಲಿಯೂ ಎದ್ದು ನಿಲ್ಲುವರು.)

ಸಂನ್ಯಾಸಿ (ಓಡಿಹೋಗಿ ಲಿಂಗಣ್ಣನನ್ನು ಹಿಡಿದುಕೊಂಡು)—ತಾಳ್ಮೆ ! ತಾಳ್ಮೆ !

ಸೈನಿಕ—ಆಕೆಯ ಹೆಸರು ರುದ್ರಾಂಬೆಯಂತೆ !

ಲಿಂಗಣ್ಣ (ಅತಿದಾರುಣ ವಾಣಿಯಿಂದ)—ಅಯ್ಯೋ ! ಅಯ್ಯೋ !! ಮಗಳೇ, ಕಡೆಗೂ ಏನಾಗಿಹೋದೆ ! (ಸೈನಿಕನಿಗೆ) ಅಣ್ಣಾ, ಬಾ ಬೇಗ, ಎಲ್ಲಿದ್ದಾಳೆ ತೋರಿಸು. (ಸಂನ್ಯಾಸಿಯ ಸಹಾಯದಿಂದ ಸೈನಿಕನೊಡನೆ ತತ್ತರಿಸುತ್ತ ಹೋಗುತ್ತಾನೆ. ಹೈದರಾಲಿ ಸಕರುಣ ಮುಖಭಂಗಿಯಿಂದ ಲಿಂಗಣ್ಣನನ್ನು ನೋಡುತ್ತ ಹಿಂಬಾಲಿಸುತ್ತಾನೆ.)

ಮಹಮ್ಮದಾಲಿ (ಅನುಸರಿಸುತ್ತ)—ಮುಪ್ಪು ಈ ಪೆಟ್ಟನೆಂತು ಸಹಿಸುವುದೊ ನಾ ಕಾಣೆ ! (ಹೋಗುತ್ತಾನೆ.)

[ಪರದೆ ಬೀಳುವುದು.]

## ದೃಶ್ಯ ೫

(ಬಿದನೂರಿನಲ್ಲಿ ಹೈದರಾಲಿಯ ಪಾಳೆಯದಲ್ಲಿರುವ ಒಂದು ಸೆರೆಬೀಡು. ಬೈಗುಗಪ್ಪು ಹಬ್ಬಿ ಮಸುಗುಮಸಗಾಗಿದೆ. ಭಯಂಕರವಾದ ಮೌನ ಪ್ರಮಾದ ಸೂಚಕವಾಗಿದೆ. ಪಹರಿಗಳಿಬ್ಬರು ನಿಂತು ಬೆಪ್ಪು ಹಿಡಿದವರಂತೆ ಮಿಳ್ಳಿಳನೆ ನೋಡುತ್ತಿದ್ದಾರೆ. ಒಂದೆಡೆ ನೆತ್ತರುಗೆಸರಿನಲ್ಲಿ ನಾದು ಶಿವಯ್ಯ ಸತ್ತು ಬಿದ್ದಿದ್ದಾನೆ. ಆತನ ಕೈಕಾಲುಗಳಲ್ಲಿ ಕಬ್ಬಿಣದ ಸಂಕೋಲೆಗಳಿವೆ. ಶಿವಯ್ಯನಿಗೆ ತುಸುದೂರದಲ್ಲಿ ರುದ್ರಾಂಬೆ ನರಳುತ್ತಾ ಬಿದ್ದಿದ್ದಾಳೆ. ಆಕೆಯ ಮುಡಿ ಕೆದರಿಹೋಗಿ ರಕ್ತಸಿಕ್ತವಾಗಿ ವಿಕಾರವಾಗಿದ್ದಾಳೆ. ಮೊಗಮೈಯೆಲ್ಲ ನೆತ್ತರು. ಎದೆಗೆ ಚುಚ್ಚಿದ ಕಠಾರಿಯ ಹಿಡಿಯನ್ನು ಬಲಗೈಯ್ಯಲ್ಲಿ ಮೆಲ್ಲಗೆ ಹಿಡಿದುಕೊಂಡು ಎಡಗೈಮೇಲೆ ಅರೆಎದ್ದು ತಂದೆಯ ಬರುವಿಕೆಯನ್ನೇ ಹಾರುತ್ತಿದ್ದಾಳೆ. ಆಕೆಯ ಕಣ್ಣು ಕೆಂಡವಾಗಿವೆ. ಲಿಂಗಣ್ಣ ಮಂತ್ರಿ ಸಂನ್ಯಾಸಿಯ ಕೈ ಹಿಡಿದುಕೊಂಡು ಅವರ್ಣನೀಯವಾದ ನಿರ್ವಿಣ್ಣಭಾವದಿಂದ ಹತಾಶನಾಗಿ ಜೀವಶವ

ದಂತೆ ಮೆಲ್ಲಗೆ ಪ್ರವೇಶಿಸುತ್ತಾನೆ. ಸ್ವಲ್ಪ ದೂರದಲ್ಲಿ ಬಿದ್ದಿರುವ ತನ್ನ ಮುದ್ದುಮಗಳ ರುದ್ರ ಸ್ಥಿತಿಯನ್ನು ನೋಡಿದೊಡನೆ ಝುಗ್ಗನೆ ನಿಂತು ಹುಚ್ಚಾಗುತ್ತಾನೆ; ಸಂನ್ಯಾಸಿಯ ಕೈ ಕೊಡಹಿ ಬಿಡಿಸಿಕೊಂಡು ಎರಡು ಕೈಗಳಿಂದಲೂ ತಲೆಗೂದಲು ಕಿತ್ತುಕೊಂಡು ತಲೆಯುಡುಗೆ ಅಸ್ತವ್ಯಸ್ತವಾಗಿ ಹೋರಾಡುತ್ತಿರೆ ಮಗಳನ್ನೇ ನೋಡುತ್ತ ಅತಿಶೋಚನೀಯವಾದ ದೀರ್ಘ ಸ್ವರದಿಂದ "ಅಯ್ಯೋ!" ಎಂದು ಕರುಳು ಬೇಯುವಂತೆ ಚೀರಿ ತತ್ತರಿಸುತ್ತ ಮುಂದೆ ನುಗ್ಗಿ ಮಗಳ ಮೇಲೆ ಕವಿದು ಬೀಳುತ್ತಾನೆ. ರುದ್ರಾಂಬೆ ತಂದೆ ಬೀಡಿಗೆ ಬಂದ ಕೂಡಲೆ ಎದ್ದು ಕೊರಳೆಳಸಿ ಆಗದೆ, "ಬಂದೆಯಾ ತಂದೆ!' ಎಂದು ಕೂಗಿ ಬೀಳುತ್ತಾಳೆ. ಪಹರಿಗಳು ಕರ್ತವ್ಯತಾಮೂಢರಾಗಿ ನಿಲ್ಲುತ್ತಾರೆ. ಸಂನ್ಯಾಸಿ ತಂದೆ ಮಕ್ಕಳ ಬಳಿಗೆ ಓಡುತ್ತಾನೆ. ಅಷ್ಟರಲ್ಲಿ ಹೈದರಾಲಿ ಮಹಮ್ಮದಾಲಿಗಳೂ ಪ್ರವೇಶಿಸಿ ಕರಾಳ ದೃಶ್ಯವನ್ನು ನೋಡಿ ಮಂತ್ರಮುಗ್ಧರಾದವರಂತೆ ಎವೆಯಿಕ್ಕದೆ ನಿಲ್ಲುತ್ತಾರೆ. ಬಾಗಿ ನಿಂತ ಸಂನ್ಯಾಸಿ ಹತಾಶನಾಗಿ ನಿಡುಸುಯ್ದು ಮೇಲೇಳುತ್ತಾನೆ. ಎಲ್ಲರೂ ಮಂಕುಹಿಡಿದವರಂತೆ ಒಬ್ಬರ ಮೊಗವನ್ನೊಬ್ಬರು ನೋಡುತ್ತಾರೆ.)

[ಪರದೆ ಬೀಳುವುದು.]

---



# ಕನ್ನಡ ಕಾವ್ಯಮಾಲೆ

ಬೆಳೆಯುತ್ತಿರುವ ಕನ್ನಡ ಗ್ರಂಥಮಾಲೆ. ಕಥೆ, ಕವನ, ಕಾದಂಬರಿ, ಚಿತ್ರ, ನಾಟಕ, ಪ್ರಬಂಧ, ವಿಮರ್ಶೆ, ಭಾಷಣ, ಜೀವನ ಚರಿತ್ರೆ ಇತ್ಯಾದಿಯಾದ ಬಹುವಿಧದ ಗ್ರಂಥಗಳನ್ನೊಳಗೊಂಡ ಕಾವ್ಯಮಾಲೆ. ಪ್ರಕಟನೆಗಳು ಕ್ರೌನ್ ಅಷ್ಟಪತ್ರ ಆಕಾರದಲ್ಲಿವೆ. ಇದುವರೆಗೆ ಪ್ರಕಟವಾಗಿರುವ ಗ್ರಂಥಗಳು:

ಕುವೆಂಪು—

| | | | |
|---|---|---|---|
| ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು .... .... | (ಮುಗಿದಿವೆ) | | |
| ಸಂನ್ಯಾಸಿ ಮತ್ತು ಇತರ ಕಥೆಗಳು .... .... .... | ೧ | ೪ | ೦ |
| ಚಿತ್ರಾಂಗದಾ (ಮಹಾಕಾವ್ಯ) .... .... .... | (ಮುಗಿದಿವೆ) | | |
| ಕಾನೂರು ಸುಬ್ಬಮ್ಮ ಹೆಗ್ಗಡಿತಿ (ಕಾದಂಬರಿ) .... .... | ,, | | |
| ನನ್ನ ದೇವರು ಮತ್ತು ಇತರ ಕಥೆಗಳು .... .... | ೧ | ೪ | ೦ |

ಪು. ತಿ. ನರಸಿಂಹಾಚಾರ್—

| | | | |
|---|---|---|---|
| ಅಹಲ್ಯೆ (ಗೀತರೂಪಕ) .... .... .... | ೧ | ೮ | ೦ |

ಕುವೆಂಪು—

| | | | |
|---|---|---|---|
| ಮೂರು ನಾಟಕಗಳು (ಮಹಾರಾತ್ರಿ, ಶ್ಮಶಾನಕುರುಕ್ಷೇತ್ರಂ, ಜಲಗಾರ) | ೧ | ೮ | ೦ |

ತೀ. ನಂ. ಶ್ರೀಕಂಠಯ್ಯ—

| | | | |
|---|---|---|---|
| ರಾಕ್ಷಸನ ಮುದ್ರಿಕೆ .... .... .... .... | ೧ | ೪ | ೦ |

ಗೊರೂರು ರಾಮಸ್ವಾಮಿ ಐಯಂಗಾರ್—

| | | | |
|---|---|---|---|
| ಹಳ್ಳಿಯ ಚಿತ್ರಗಳು .... .... .... .... | ೧ | ೪ | ೦ |

ಪು. ತಿ. ನರಸಿಂಹಾಚಾರ್—

| | | | |
|---|---|---|---|
| ದೋಣಿಯ ಬಿನದ ಮತ್ತು ಕವಿ (ಗೀತರೂಪಕಗಳು) .... | ೧ | ೦ | ೦ |
| ರಾಮಾಚಾರಿಯ ನೆನಪು (ಗದ್ಯಚಿತ್ರಗಳು) .... .... | ೧ | ೪ | ೦ |
| ಶಾರದ ಯಾಮಿನಿ (ಕವನಗಳು) .... .... .... | ೧ | ೦ | ೦ |

ಕುವೆಂಪು—

ಸಾಹಿತ್ಯ ಪ್ರಚಾರ ಮತ್ತು ಇತರ ಭಾಷಣಗಳು .... .... ೧ ೨ ೬
ನಿರಂಕುಶಮತಿಗಳಾಗಿ (ಭಾಷಣಗಳು) .... .... ೦ ೧೨ ೬
ಮಲೆನಾಡಿನ ಚಿತ್ರಗಳು .... .... .... ೧ ೧೨ ೬
ಪಾಂಚಜನ್ಯ (ಕವನಗಳು) .... .... .... ೧ ೪ ೬

ಎಸ್. ವಿ. ರಂಗಣ್ಣ—

ಶೈಲಿ (ಶೈಲಿಯ ಸ್ವರೂಪ, ಪಂಪನ ಶೈಲಿ, ರನ್ನನ ಶೈಲಿ, ರಾಘವಾಂಕನ ಶೈಲಿ, ಕುಮಾರವ್ಯಾಸನ ಶೈಲಿ) .... .... .... ೧ ೧೪ ೬

ಆನಂದ—

ಸ್ವಪ್ನಜೀವಿ ಮತ್ತು ಇತರ ಕಥೆಗಳು .... .... ೧ ೦ ೬

ಪು. ತಿ. ನರಸಿಂಹಾಚಾರ್—

ಗೋಕುಲ ನಿರ್ಗಮನ (ಗೀತರೂಪಕ) .... .... ೧ ೦ ೬

ಕುವೆಂಪು—

ರಕ್ತಾಕ್ಷಿ (ನಾಟಕ) .... .... .... .... ೧ ೧೨ ೦

ಪು. ತಿ. ನರಸಿಂಹಾಚಾರ್—

ರಥಸಪ್ತಮಿ ಮತ್ತು ಇತರ ಚಿತ್ರಗಳು .... .... .... ಅಚ್ಚಿನಲ್ಲಿ